KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಮೇ ೨೮, ೨೦೦೯ (ಜ್ಯೇಷ್ಠ ೭, ಶಕ ವರ್ಷ ೧೯೩೧) | ಸಂಚಿಕೆ ೨೨ |
| --- | --- | --- |

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ನಾಗರಾಜ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ – ಪರಿಷ್ಕೃತ ಅಂತಿಮ ಆದೇಶ.

**ಓದಲಾಗಿದೆ:**
1. ದಿನಾಂಕ: 23.02.08ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 070 ಕೆಇವಿ 07
2. ದಿನಾಂಕ: 13.10.08ರ ತಿದ್ದುಪಡಿ ಸಂಖ್ಯೆ: ಸಿಆಸುಇ 070 ಕೆಇವಿ 07
3. ದಿನಾಂಕ: 13.10.08ರ ಹಿಂಬರಹ ಸಂಖ್ಯೆ: ಸಿಆಸುಇ 045 ಕೆಇವಿ 08
4. ಶ್ರೀ ನಾಗರಾಜ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಇವರು ಮುಖ್ಯ ಕಾರ್ಯದರ್ಶಿ ಯವರಿಗೆ ಸಲ್ಲಿಸಿದ ಮೇಲ್ಮನವಿ ದಿನಾಂಕ: 18.09.08.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ, ಶ್ರೀ ನಾಗರಾಜ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಇವರನ್ನು ದಿನಾಂಕ: 20.06.06ರ ಅಧಿಸೂಚನೆ ಸಂಖ್ಯೆ: ಸಿಆಸುಇ 097 ಆಸೇವ 06 ರ ಪ್ರಕಾರ ಉಪ ವಿಭಾಗಾಧಿಕಾರಿ, ರಾಯಚೂರು ಉಪ ವಿಭಾಗ, ರಾಯಚೂರು ಹುದ್ದೆಗೆ ವರ್ಗಾಯಿಸಿದ್ದು, ಇವರು ಸದರಿ ಹುದ್ದೆಗೆ ಹಾಜರಾಗದೆ ಅನಧಿಕೃತ ಗೈರುಹಾಜರಾದ ಆರೋಪದ ಸತ್ಯಾಸತ್ಯತೆಯನ್ನು ವಿಚಾರಣೆಯ ಮೂಲಕ ತಿಳಿಯಲು ಇವರ ವಿರುದ್ಧ ನಿಯಮಾನುಸಾರ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಿ, ಸಲ್ಲಿಸಲಾದ ವಿಚಾರಣಾ ವರದಿಯ ಆಧಾರದ ಮೇಲೆ ಇವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ ತಡೆ ಹಿಡಿಯಲು ಮತ್ತು ಗೈರುಹಾಜರಾದ ದಿನಾಂಕ: 20.06.06 ರಿಂದ 15.12.06 ರವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ, 1958ರ ನಿಯಮ 106–A ರ ಪ್ರಕಾರ dies-non ಅವಧಿಯೆಂದು ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಗೈರು ಹಾಜರಿ ಅವಧಿಯನ್ನು ದಿನಾಂಕ: 22.06.06 ರಿಂದ 15.12.06 ರವರೆಗೆ ಎಂದು ತಿದ್ದುಪಡಿ ಮಾಡಿ, ಈ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ, 1958ರ ರ ಪ್ರಕಾರ ಕರ್ತವ್ಯ ರಹಿತ (dies-non) ಅವಧಿಯೆಂದು ತಿದ್ದುಪಡಿ ಆದೇಶ ಹೊರಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ದಿನಾಂಕ: 23.02.08 ರ ಸರ್ಕಾರಿ ಆದೇಶದ ವಿರುದ್ಧ ಅಧಿಕಾರಿಯು ಸಲ್ಲಿಸಿದ ಮೇಲ್ಮನವಿಗಳನ್ನು ಸರ್ಕಾರವು ತಿರಸ್ಕರಿಸಿ ಹಿಂಬರಹ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ, ಅಧಿಕಾರಿಯು, ತಾನು ವೈರಲ್ ಜ್ವರಕ್ಕೆ ತುತ್ತಾಗಿ ಇದು ಉಲ್ಬಣಗೊಂಡು ಜಾಂಡೀಸ್ ರೋಗವಾಗಿ ಪರಿಣಮಿಸಿದ್ದರಿಂದ ವೈದ್ಯಕೀಯ ಉಪಚಾರದಲ್ಲಿ ವಿಶ್ರಾಂತಿ ಅನಿವಾರ್ಯವಿದ್ದ ಕಾರಣ, ವರ್ಗಾಯಿಸಲಾದ ಹುದ್ದೆಗೆ ಹಾಜರಾಗಲು ಸಾಧ್ಯವಾಗಲಿಲ್ಲವೆಂದು ಈ ಬಗ್ಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ಸಹ

ಸಲ್ಲಿಸಲಾಗಿತ್ತೆಂದು ತಿಳಿಸುತ್ತಾ, ದಂಡನಾದೇಶವನ್ನು ರದ್ದುಪಡಿಸುವಂತೆ ಮನವಿ ಮಾಡಿರುತ್ತಾರೆ. ಸರ್ಕಾರವು ಇವರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 045 ಕೆಇವಿ 08, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟಿರುವ ಹಿನ್ನೆಲೆ ಹಾಗೂ ದಾಖಲೆಗಳ ಪರಿಶೀಲನೆಯಿಂದ, ಶ್ರೀ ನಾಗರಾಜ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿಯು ವೈದ್ಯಕೀಯ ಪ್ರಮಾಣ ಪತ್ರದ ಆಧಾರದ ಮೇಲೆ ಸಲ್ಲಿಸಿದ ವೈದ್ಯಕೀಯ ರಜಾ ಅರ್ಜಿಯನ್ನು ಪರಿಗಣಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 27 ರಡಿ ಪ್ರಕರಣವನ್ನು ಪುನರ್‌ಪರಿಶೀಲಿಸಿ, ದಿನಾಂಕ: 23.02.08 ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 070 ಕೆಇವಿ 07 ಮತ್ತು ದಿನಾಂಕ: 13.10.08ರ ತಿದ್ದುಪಡಿ ಸಂಖ್ಯೆ: ಸಿಆಸುಇ 070 ಕೆಇವಿ 07 ಅನ್ನು ರದ್ದುಪಡಿಸಿದೆ ಮತ್ತು ದಿನಾಂಕ: 22.06.06 ರಿಂದ 15.12.06 ರವರೆಗಿನ ಅನಧಿಕೃತ ಗೈರುಹಾಜರಿ ಅವಧಿಯನ್ನು ವೈದ್ಯಕೀಯ ಕಾರಣದ ಮೇಲೆ ಅಧಿಕಾರಿಯ ಲೆಕ್ಕದಲ್ಲಿರುವ ರಜೆಯೆಂದು ನಿಯಮಾನುಸಾರ ಮಂಜೂರು ಮಾಡಿದೆ. ಇನ್ನು ಮುಂದೆ ಇಂತಹ ಪ್ರಕರಣಗಳಿಗೆ ಅವಕಾಶ ನೀಡದಂತೆ ನಡೆದುಕೊಳ್ಳಲು ಇವರಿಗೆ ಎಚ್ಚರಿಕೆ ನೀಡುತ್ತಾ, ಇವರನ್ನು ದೋಷಮುಕ್ತಗೊಳಿಸಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಶ್ರೀಯುತರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ನಾಗೇಂದ್ರ**

ಪಿ.ಆರ್. 1044

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** ಬೆಂಗಳೂರು ವಿದುನ್ಮಾನ ನಗರದಲ್ಲಿ ಜೈವಿಕ ತಂತ್ರಜ್ಞಾನ ಉದ್ಯಾನ [Biotech Park] ಯೋಜನೆಯ ಭಾಗ 'ಎ' ಹಂತ-2ರ ಕಾಮಗಾರಿಗಳ ಅನುಷ್ಠಾನಕ್ಕಾಗಿ 2008-09ನೇ ಸಾಲಿಗೆ ಸಂಬಂಧಿಸಿದ ಅನುದಾನ ಬಿಡುಗಡೆ ಮಾಡುವಬಗ್ಗೆ.

**ಓದಲಾಗಿದೆ:** ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು ಇವರ ಪತ್ರ ಸಂ: ಕೆಬಿಟ್ಸ್/ಬಿಟಿಪಿ/ಭಾಗ-ಎ ಹಂತ-2/ಕ-9/08-09, ದಿನಾಂಕ: 24.2.2009.

**ಪ್ರಸ್ತಾವನೆ:**

ಮೇಲೆ ಓದಲಾದ ಪ್ರಧಾನ ವ್ಯವಸ್ಥಾಪಕರು ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು ಇವರ ಪತ್ರದಲ್ಲಿ ಬಯೋಟೆಕ್ ಪಾರ್ಕ್ ಯೋಜನೆಯ ಭಾಗ ಎ-2ನೇ ಹಂತದ ಕಾಮಗಾರಿಗಳಾದ ಸಿಹೆಚ್‌ಜಿ ಕಟ್ಟಡದ 1ನೇ ಮಹಡಿ ಮತ್ತು ಹಾಸ್ಟೆಲ್ ಕಟ್ಟಡದ 2ನೇ ಮಹಡಿ ನಿರ್ಮಾಣ ಕಾರ್ಯಕ್ಕಾಗಿ ರೂ. 222.66 ಲಕ್ಷಗಳ ಅಂದಾಜು ಪಟ್ಟಿಗೆ ತಾಂತ್ರಿಕ ಪರಿಶೀಲನೆಯನ್ನು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು [ದಕ್ಷಿಣ] ಬೆಂಗಳೂರು ಇವರಿಂದ ದಿನಾಂಕ: 29.1.2008ರಲ್ಲಿ ಅನುಮೋದನೆಯನ್ನು ಪಡೆಯಲಾಗಿದ್ದು 2008-0ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾದ ರೂ. 200.00 ಲಕ್ಷಗಳನ್ನು ಬಿಡುಗಡೆಗೊಳಿಸಿದ ಕೂಡಲೇ ಟೆಂಡರ್ ಪ್ರಕ್ರಿಯೆ ಪ್ರಾರಂಭಿಸಿ ನಿರ್ಮಾಣ ಕಾರ್ಯವನ್ನು ಕೈಗೆತ್ತಿಕೊಳ್ಳಲಾಗುವುದೆಂದು ತಿಳಿಸುತ್ತಾ, ಸದರಿ ಅನುದಾನವನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ. ಮಾತಂಇ 36 ಅಚವಿ 2008, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಬಯೋಟೆಕ್ ಪಾರ್ಕ್ ಯೋಜನೆಯ ಭಾಗ-ಎ 2ನೇ ಹಂತದ ಕಾಮಗಾರಿಗಳನ್ನು ಕಾರ್ಯಗತಗೊಳಿಸಲು 2008-09ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾದ ರೂ. 200.00 ಲಕ್ಷಗಳ [ರೂ. ಎರಡುನೂರು ಲಕ್ಷಗಳು ಮಾತ್ರ] ಅನುದಾನವನ್ನು ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು ಸಂಸ್ಥೆಗೆ ವಿತರಿಸುವ ಸಂಬಂಧ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾದ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ನಿರ್ದೇಶಕರು, ಕೆಬಿಟ್ಸ್ ಸಂಸ್ಥೆ ಇವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2008-09ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ '5465-01-190-1-09 ಬಯೋಟೆಕ್ ಪಾರ್ಕ್-059-ಇತರೆ ಖರ್ಚುಗಳು (ಯೋಜನೆ)' ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ನಿರ್ದೇಶಕರು ಕೆಬಿಟ್ಸ್ ಸಂಸ್ಥೆ ಇವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 93 ವೆಚ್ಚ–2/2009, ದಿನಾಂಕ: 28.03.2009 ರಲ್ಲಿನ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 1045 ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ವಿಷಯ:** ಗ್ರಾಮೀಣ ಬಿಪಿಓ ಕೇಂದ್ರಗಳನ್ನು ತೆರೆಯಲು ಸಹಾಯಧನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ: 19.01.2009.
2. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008 [1], ದಿನಾಂಕ: 4.2.2009.
3. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008 [2], ದಿನಾಂಕ: 4.2.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರವು 1 ಲಕ್ಷಕ್ಕಿಂತ ಕಡಿಮೆ ಜನಸಂಖ್ಯೆಯುಳ್ಳ ತಾಲ್ಲೂಕು / ಹೋಬಳಿ ಕೇಂದ್ರ ಸ್ಥಳಗಳಲ್ಲಿ ಗ್ರಾಮಾಂತರ ಬಿ.ಪಿ.ಓ. ಕೇಂದ್ರಗಳನ್ನು ಸ್ಥಾಪಿಸುವ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸಲು ಹಾಗೂ 100 ವ್ಯಕ್ತಿಗಳಿಗೆ ಕಡಿಮೆ ಇಲ್ಲದಂತೆ ನೇರ ಉದ್ಯೋಗವನ್ನು ನೀಡುವ ಗ್ರಾಮೀಣ ಬಿ.ಪಿ.ಓ. ಕೇಂದ್ರವು ರಾಜ್ಯ ಸರ್ಕಾರದಿಂದ ಈ ಕೆಳಕಂಡ ಆರ್ಥಿಕ ಬೆಂಬಲ ನೀಡಲು ಆದೇಶ ಹೊರಡಿಸಲಾಗಿದೆ:–

**ಅನಾವರ್ತ ಆರ್ಥಿಕ ಬೆಂಬಲ [Non-recurring Financial Support]**

1] ಪ್ರತಿ 100 ಆಸನದ ಬಿಪಿಓ ಘಟಕಗಳಿಗೆ ರೂ. 20.00 ಲಕ್ಷದವರೆಗೆ ಬಂಡವಾಳ ಹೂಡಿಕೆ ಸಹಾಯಧನ.

2] ಮಾನವಶಕ್ತಿ ತರಬೇತಿಗಾಗಿ ಪ್ರತಿ ಉದ್ಯೋಗಿಗೆ ರೂ. 10000 ಆರ್ಥಿಕ ಬೆಂಬಲ.

**ಆವರ್ತ ಆರ್ಥಿಕ ಬೆಂಬಲ [Recurring Financial Support]**

1] ಕಟ್ಟಡದ ಬಾಡಿಗೆಗಳು ಮತ್ತು ಅಂತರ್ಜಾಲ ಜೋಡಣೆಯ ವೆಚ್ಚವನ್ನು ಭರಿಸಲು ಪ್ರತಿ ಉದ್ಯೋಗಿಗೆ ಸಹಾಯಧನವಾಗಿ ರೂ. 5000 ಆರ್ಥಿಕ ಬೆಂಬಲ.

ಮೇಲೆ [2]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ ಮಾರ್ಗಸೂಚಿಗಳನ್ನು ಹೊರಡಿಸಲಾಗಿದೆ ಹಾಗೂ ಅರ್ಜಿಯ ನಮೂನೆಯನ್ನು ನಿಗದಿಪಡಿಸಲಾಗಿದೆ.

ಮೇಲೆ [3]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಸಂಬಂಧ ಸ್ವೀಕರಿಸಿದ ಅರ್ಜಿಗಳನ್ನು ಪರಿಶೀಲಿಸಿ ಅರ್ಹ ಅರ್ಜಿಗಳನ್ನು ಸರ್ಕಾರದ ಅನುಮೋದನೆಗಾಗಿ ಶಿಫಾರಸ್ಸು ಮಾಡಲು ಸ್ಕ್ರೀನಿಂಗ್ ಕಮಿಟಿಯನ್ನು ರಚಿಸಲಾಗಿದೆ.

ಗ್ರಾಮೀಣ ಪ್ರದೇಶಗಳಲ್ಲಿ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಉದ್ದೇಶಕ್ಕಾಗಿ 2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "5465–01–190–1–14 ಗ್ರಾಮೀಣ ಬಿಪಿಓಗಳು 059 ಇತರೆ ಖರ್ಚು [ಯೋಜನೆ]" ಇದರಡಿಯಲ್ಲಿ ಒದಗಿಸಲಾದ ರೂ. 500 ಲಕ್ಷಗಳ ಅನುದಾನದಲ್ಲಿ ರೂ. 100 ಲಕ್ಷಗಳನ್ನು ಬಿಡುಗಡೆ ಮಾಡಲು ಆರ್ಥಿಕ ಇಲಾಖೆ ಅನುಮೋದಿಸಿದ್ದು, ಅದರಂತೆ ಈ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 39 ಎಂಡಿಎ 2008, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ಹೇಳಿರುವ ಸಂದರ್ಭದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಉದ್ದೇಶಕ್ಕಾಗಿ 2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ **"5465–01–190–1–14 ಗ್ರಾಮೀಣ ಬಿಪಿಓಗಳು 059 ಇತರೆ ಖರ್ಚು [ಯೋಜನೆ]"** ಇದರಡಿಯಲ್ಲಿ ಒದಗಿಸಲಾದ ರೂ. 500 ಲಕ್ಷಗಳಲ್ಲಿ ರೂ. 100 ಲಕ್ಷಗಳನ್ನು [ರೂ. ನೂರು ಲಕ್ಷಗಳು ಮಾತ್ರ] ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ಪ್ರಧಾನ ವ್ಯವಸ್ಥಾಪಕರು, ಕೆಬಿಟ್ಸ್ ಇವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2007–08ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **"5465–01–190–1–14 ಗ್ರಾಮೀಣ ಬಿಪಿಓಗಳು 059 ಇತರೆ ಖರ್ಚು [ಯೋಜನೆ]"** ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ಪ್ರಧಾನ ವ್ಯವಸ್ಥಾಪಕರು, ಕೆಬಿಟ್ಸ್ ಸಂಸ್ಥೆ ಇವರಿಂದ [ಸಂಬಂಧಪಟ್ಟ ಗ್ರಾಮೀಣ ಬಿಪಿಓ ಕೇಂದ್ರಗಳಿಂದ ಉಪಯೋಗಿತಾ ದೃಢೀಕರಣ ಪತ್ರಗಳನ್ನು ವೆಚ್ಚ ಮಾಡಿದ ಅನುದಾನದ ವಿವರಗಳೊಂದಿಗೆ ಪಡೆದು] ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 119 ವೆಚ್ಚ–2/2009, ದಿನಾಂಕ: 28.03.2009 ಇದರನ್ವಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 1046 ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

## HEALTH & FAMILY WELFARE SECRETARIAT

**Sub:** Providing consultancy services for internal audit of Karnataka Health System Development & Reform Project (IDA Credit 4229-IN) for 2008-09 – reg.

**Preamble:**

The Project agreed to get an internal audit done for Project accounts through a Chartered Accountants firm; as suggested by the World Bank Mission during its review in February 2008. The Terms of Reference were prepared in consultation with the Bank and a notification inviting Expression of Interest (EoI) was issued the Karnataka Prabha on 04.07.2008 and Times of India on 05.07.2008 responded to the notification and submitted EOIs. An evaluation of the EOIs was carried out based on the qualifications criteria stipulated in the notification, the profile/experience of the firms, etc. A panel of eligible firms was shortlisted to whom request for Proposal (RFP) was issued seeking submission of Technical and Financial bids. A pre proposal conference was arranged for these shortlisted firms on 26.09.2008 to give additional details about the Project and clarified doubts if any posed by the shortlisted firms. In response to the RFP, technical and financial bids were received from seven CA firms. After evaluation of the technical and financial bids, the L1 bid submitted by Roy Ghosh & Associates, Chartered Accountants, Howrah at Rs. 2,55,600.00 (inclusive of all expenses) + applicable service tax, was acepted. Concurrence of the Bank has been obtained for appointment of Roy Ghosh & Associates, Chartered Accountants, Howrah, as the Project Internal Auditors vide e-mail dated 29th December 2008.

Hence the following order.

**Govt. Order No. HFW (PR) 43 WBA 2009, Bangalore, Dated: 28th February 2009**

In the circumstaces mentioned in the preamble, Government are pleased to appoint Roy Ghosh & Associates, Chartered Accountants, 545, GT Road, South, 4th Floor, Room No. 10, Howrah-711101 as Project Internal Auditors for the year 2008-09, for a remueration of Rs. 2,55,600.00 (Rupees two lakhs fiftyfive thousand six hundred only) (Inclusive of all expenses) + Service Tax, as applicable.

The firm shall enter into an agreement that will include the To Rs, with the Project.

Expenditure on this account is debitable to Head of acount 2210-06-800-0-84 KHSDRP Project Management and Evaluation – EAP – 051.

By Order and in the name of Governor of Karnataka,

**SUSHAMA GODBOLE**

P.R. 1051 Deputy Secretary to Government, KHSDRP

Health & Family Welfare Department.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಕರ್ನಾಟಕ ಆರೋಗ್ಯ ವ್ಯವಸ್ಥೆ ಮತ್ತು ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯಡಿ ಅಂತರ್ಜಾಲ ಆಧಾರಿತ ಯೋಜನಾ ನಿರ್ವಹಣಾ ವ್ಯವಸ್ಥೆಯನ್ನು (WBPMS) ಅಳವಡಿಸುವ ಬಗ್ಗೆ.

**ಓದಲಾಗಿದೆ:**
1. ಯೋಜನಾ ಕಚೇರಿಯಿಂದ ಕರ್ನಾಟಕ ರಾಜ್ಯ ಪೊಲೀಸ್ ವಸತಿ ನಿಗಮ ನಿಯಮಿತ, ಬೆಂಗಳೂರು ಇವರಿಗೆ ಬರೆಯಲಾದ ಪತ್ರ ಸಂ: ಹೆಚ್‌ಎಫ್‌ಡಬ್ಲ್ಯೂ/ಕೆಹೆಚ್‌ಎಸ್‌ಡಿಆರ್‌ಪಿ/ಪಿಎ/ಇ–ಟೆಂಡರಿಂಗ್/2008–09/01, ದಿ: 28.04.2008.
2. ಕಾರ್ಯಕ್ರಮ ಚಾಲನಾ ಸಮಿತಿಯ 10ನೇ ಸಭೆಯ ನಡವಳಿಗಳು ದಿ: 05.11.2008.
3. ವಿಶ್ವಬ್ಯಾಂಕ್ ಇವರಿಂದ ಸ್ವೀಕೃತವಾದ ಇ–ಮೇಲ್ ದಿನಾಂಕ: 24.11.08.
4. ಅಧೀಕ್ಷಕ ಅಭಿಯಂತರರು, ಕೆಎಚ್‌ಎಸ್‌ಡಿಆರ್‌ಪಿ, ಬೆಂಗಳೂರು ಮತ್ತು ಕಾರ್ಯಪಾಲಕ ಅಭಿಯಂತರರು, ಕರ್ನಾಟಕ ರಾಜ್ಯ ಪೊಲೀಸ್ ವಸತಿ ನಿಗಮ ನಿಯಮಿತ, ಬೆಂಗಳೂರು ಇವರ ಒಪ್ಪಂದ ಸಂಖ್ಯೆ 86/21.01.2009.

**ಪ್ರಸ್ತಾವನೆ:**

ವಿಶ್ವಬ್ಯಾಂಕ್ ಮಿಶನ್‌ನೊಂದಿಗೆ ಫೆಬ್ರವರಿ–2008ರಲ್ಲಿ ನಡೆದ ವಿಮರ್ಶಾ ಸಭೆಯಲ್ಲಿ ಒಪ್ಪಲಾದಂತೆ, ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯಡಿಯಲ್ಲಿ ಕೈಗೊಳ್ಳುವ ಸಿವಿಲ್ ಕಾಮಗಾರಿಗಳ ಪ್ರಗತಿಯ ಮೌಲ್ಯಾಂಕನ ಮತ್ತು ಪರಿಶೀಲನೆ ನಡೆಸಲು ಅಂತರ್ಜಾಲ ಆಧಾರಿತ ಯೋಜನಾ ನಿರ್ವಹಣಾ ವ್ಯವಸ್ಥೆಯನ್ನು ಅಳವಡಿಸುವ ಸಲುವಾಗಿ ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ರಾಜ್ಯ ಪೊಲೀಸ್ ವಸತಿ ನಿಗಮ ನಿಯಮಿತವನ್ನು ಕೋರಲಾಗಿರುತ್ತದೆ. ಈ ಬಗ್ಗೆ ಯೋಜನಾ ಚಾಲನಾ ಸಮಿತಿಯ 10ನೇ ಸಭೆಯಲ್ಲಿ ಚರ್ಚಿಸಲಾಗಿದೆ. ಯೋಜನಾ ಚಾಲನಾ ಸಮಿತಿಯು ವಿಶ್ವಬ್ಯಾಂಕ್ ಸಹಮತಿಗೆ ಒಳಪಟ್ಟು ಕರ್ನಾಟಕ ರಾಜ್ಯ ಪೊಲೀಸ್ ವಸತಿ ನಿಗಮ ನಿಯಮಿತ ಇವರಿಂದ ಸೇವೆಯನ್ನು ಪಡೆದುಕೊಳ್ಳಲು ಅಗತ್ಯವಾದ ಒಪ್ಪಂದವನ್ನು ಮಾಡಿಕೊಳ್ಳಲು ಮೇಲೆ (2)ರಲ್ಲಿ ಓದಲಾದ ಸಭೆ ನಡವಳಿಗಳಲ್ಲಿ ಅನುಮೋದನೆ ನೀಡಿರುತ್ತದೆ. ಈ ಬಗ್ಗೆ ವಿಶ್ವಬ್ಯಾಂಕ್ ಸಹ ತನ್ನ ಸಹಮತಿಯನ್ನು ಮೇಲೆ (3) ರಲ್ಲಿ ಓದಲಾದ ಇ–ಮೇಲ್ ಮೂಲಕ ತಿಳಿಸಿರುತ್ತದೆ. ಕರ್ನಾಟಕ ರಾಜ್ಯ ಪೊಲೀಸ್ ವಸತಿ ನಿಗಮ ನಿಯಮಿತದ ಕಾರ್ಯಪಾಲಕ ಅಭಿಯಂತರರು ಇವರೊಂದಿಗೆ ಯೋಜನಾ ಕಚೇರಿಯ ಅಧೀಕ್ಷಕ ಅಭಿಯಂತರರು ಮೇಲೆ (4)ರಲ್ಲಿ ಓದಲಾದ ಒಪಂದಕ್ಕೆ ಸಹಿ ಹಾಕಿರುತ್ತಾರೆ. ಸದರಿ ಒಪ್ಪಂದವು ಅಂತರ್ಜಾಲ ಆಧಾರಿತ ಯೋಜನಾ ನಿರ್ವಹಣಾ ವ್ಯವಸ್ಥೆಯನ್ನು ಅಳವಡಿಸುವ ಬಗ್ಗೆ ಎರಡೂ ಪಕ್ಷಗಳು ಪರಸ್ಪರ ಒಪ್ಪಿಕೊಂಡಿರುವ ಕರಾರು ಮತ್ತು ಷರತ್ತುಗಳನ್ನು ಒಳಗೊಂಡಿರುತ್ತದೆ. ಒಪ್ಪಂದದನ್ವಯ ಈ ಕೆಳಕಂಡ ಷರತ್ತುಗಳ ಮೇರೆಗೆ ಯೋಜನಾ ಕಚೇರಿಯು ಕರ್ನಾಟಕ ರಾಜ್ಯ ಪೊಲೀಸ್ ವಸತಿ ನಿಗಮ ನಿಯಮಿತಕ್ಕೆ ಹಣ ಪಾವತಿಸಬೇಕಾಗಿರುತ್ತದೆ.

1) ಯೋಜನಾ ನಿರ್ವಹಣಾ ವ್ಯವಸ್ಥೆಯನ್ನು ಅಳವಡಿಸಲು ಮೂರು ಸರ್ವರ್‌ಗಳನ್ನು ಸ್ಥಾಪಿಸಲು ತಗಲುವ ವಾಸ್ತವಿಕ ವೆಚ್ಚವನ್ನು ಪಾವತಿಸಬೇಕಾಗುವುದು. ಒಪ್ಪಂದದ ಅವಧಿ ಮುಗಿದ ನಂತರ ಇವುಗಳನ್ನು ಯೋಜನಾ ಕಚೇರಿಗೆ ವರ್ಗಾಯಿಸಲಾಗುವುದು.
2) ಒಂದು ಸಾರಿ ಅಳವಡಿಸುವಿಕೆ, ಕಸ್ಟಮೈಸೇಷನ್ ಮತ್ತು ಗರಿಷ್ಟ 25 ಬಳಕೆದಾರರ ತಂಡಕ್ಕೆ ಒಂದು ಬಾರಿ ತರಬೇತಿ ನೀಡುವುದಕ್ಕೆ ರೂ. 5.00 ಲಕ್ಷಗಳನ್ನು ಪಾವತಿಸಬೇಕು. ಈ ಪೈಕಿ ಒಪ್ಪಂದಕ್ಕೆ ಸಹಿ ಹಾಕದ ಕೂಡಲೇ ಶೇಕಡ 50 ರಷ್ಟು ಮತ್ತು ಉಳಿದ ಶೇಕಡ 50 ರಷ್ಟು ಹಣವನ್ನು ಕಸ್ಟಮೈಸೇಷನ್ ಮತ್ತು ಸಾಫ್ಟ್‌ವೇರ್ ಅಳವಡಿಸಿ ಪ್ರಾರಂಭಿಕ ತರಬೇತಿ ನೀಡಿದ ನಂತರ ಪಾವತಿಸಬೇಕು.
3) ಹೆಚ್ಚುವರಿ ತರಬೇತಿಗೆ ತಗಲುವ ವಾಸ್ತವಿಕ ವೆಚ್ಚವನ್ನು ಪಾವತಿಸಬೇಕು.
4) ಒಪ್ಪಂದದ ಅವಧಿಯಲ್ಲಿ ಪ್ರತಿ ತ್ರೈಮಾಸಿಕಕ್ಕೆ ರೂ. 1.20 ಲಕ್ಷಗಳನ್ನು ಮುಂಗಡವಾಗಿ ಇಂಟರ್‌ನೆಟ್ ಬ್ಯಾಂಡ್ ವಿಡ್ತ್ ಶುಲ್ಕವಾಗಿ ಪಾವತಿಸತಕ್ಕದ್ದು. ಮೊದಲನೇ ತ್ರೈಮಾಸಿಕದ ಶುಲ್ಕವನ್ನು ಒಪ್ಪಂದಕ್ಕೆ ಸಹಿ ಹಾಕಿದ ಕೂಡಲೇ ಪಾವತಿಸಬೇಕು.
5) ಯೋಜನಾ ಕಚೇರಿಗೆ ಸರ್ವರ್‌ಗಳು/ಡಾಟಾಬೇಸ್ ವರ್ಗಾಯಿಸಿದ ನಂತರ ಸಾಫ್ಟ್‌ವೇರ್/ಹಾರ್ಡ್‌ವೇರ್ ಕ್ರಾಷ್ ಆದಲ್ಲಿ ಅವುಗಳನ್ನು ಪುನರ್ ಸ್ಥಾಪಿಸಲು ತಗಲುವ ವಾಸ್ತವಿಕ ವೆಚ್ಚವನ್ನು ನಿಗಮಕ್ಕೆ ಪಾವತಿಸಬೇಕು.
6) ಯೋಜನೆಯ ಮುಖ್ಯ ಕಚೇರಿಯಲ್ಲಿ ಮತ್ತು ನಿಗಮದ ಕಚೇರಿಯಲ್ಲಿ ಅಗತ್ಯ ಸಿಬ್ಬಂದಿ ನೇಮಿಸಿ ಯೋಜನಾ ನಿರ್ವಹಣಾ ವ್ಯವಸ್ಥೆಯನ್ನು ನಿರ್ವಹಿಸಲು ಮಾಸಿಕ ರೂ. 80,000–00 ಗಳ ಶುಲ್ಕ ಪಾವತಿಸಬೇಕು ಮತ್ತು ಮಾಸಿಕ ರೂ. 50,000–00 ಗಳ ಹೋಸ್ಟಿಂಗ್ ವೆಚ್ಚವನ್ನು ಪಾವತಿಸಬೇಕು.

ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣ ಯೋಜನೆಯಡಿಯಲ್ಲಿ ಅಂತರ್ಜಾಲ ಯೋಜನಾ ನಿರ್ವಹಣಾ ವ್ಯವಸ್ಥೆಯನ್ನು ಸ್ಥಾಪಿಸಲು ಕರ್ನಾಟಕ ರಾಜ್ಯ ಪೊಲೀಸ್ ವಸತಿ ನಿಗಮ ನಿಯಮಿತದೊಂದಿಗೆ ಮೇಲಿನ ಷರತ್ತುಗಳ

ಮೇರೆಗೆ ಒಪ್ಪಂದ ಮಾಡಿಕೊಂಡಿರುವುದಕ್ಕೆ ಮತ್ತು ಹಣಕಾಸಿನ ವೆಚ್ಚಕ್ಕೆ ಸರ್ಕಾರದ ಮಂಜೂರಾತಿ ನೀಡುವ ಬಗ್ಗೆ ಪರಿಶೀಲಿಸಲಾಗಿದೆ.

ಈ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಎಫ್‌ಡಬ್ಲ್ಯೂ (ಪಿಆರ್) 58 ಡಬ್ಲ್ಯೂಬಿಎ 2009, ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯಡಿಯಲ್ಲಿ ಅಂತರ್ಜಾಲ ಯೋಜನಾ ನಿರ್ವಹಣಾ ವ್ಯವಸ್ಥೆಯನ್ನು ಸ್ಥಾಪಿಸಲು ಕರ್ನಾಟಕ ರಾಜ್ಯ ಪೊಲೀಸ್ ವಸತಿ ನಿಗಮ ನಿಯಮಿತದೊಂದಿಗೆ ಒಪ್ಪಂದ ಮಾಡಿಕೊಂಡಿರುವುದಕ್ಕೆ ಮತ್ತು ಈ ಕೆಳಕಂಡ ವೆಚ್ಚಗಳನ್ನು ಭರಿಸಲು ಸರ್ಕಾರವು ಮಂಜೂರಾತಿ ನೀಡಿ ಆದೇಶಿಸಿದೆ. ಈ ಆದೇಶವು ಒಪ್ಪಂದಕ್ಕೆ ಸಹಿ ಹಾಕಿದ ದಿನಾಂಕ ಅಂದರೆ 21.01.2009ರಿಂದ ಪೂರ್ವಾನ್ವಯವಾಗುತ್ತದೆ.

1) ಅಂತರ್ಜಾಲ ಯೋಜನಾ ನಿರ್ವಹಣಾ ವ್ಯವಸ್ಥೆಯನ್ನು ಅಳವಡಿಸಲು ಮೂರು ಸರ್ವರ್‌ಗಳನ್ನು ಸ್ಥಾಪಿಸಲು ತಗಲುವ ವಾಸ್ತವಿಕ ವೆಚ್ಚವನ್ನು ಪಾವತಿಸುವುದಕ್ಕೆ.
2) ಒಂದು ಸಾರಿ ಅಳವಡಿಸುವಿಕೆ, ಕಸ್ಟಮೈಸೇಷನ್ ಮತ್ತು ಗರಿಷ್ಟ 25 ಬಳಕೆದಾರರ ತಂಡಕ್ಕೆ ಒಂದು ಬಾರಿ ತರಬೇತಿ ನೀಡುವುದಕ್ಕೆ ರೂ. 5.00 ಲಕ್ಷಗಳನ್ನು ಪಾವತಿಸುವುದಕ್ಕೆ.
3) ಹೆಚ್ಚುವರಿ ತರಬೇತಿ ನೀಡಿದಲ್ಲಿ ತಗಲುವ ವಾಸ್ತವಿಕ ವೆಚ್ಚವನ್ನು ಪಾವತಿಸುವುದಕ್ಕೆ.
4) ಒಪ್ಪಂದದ ಅವಧಿಯಲ್ಲಿ ಪ್ರತಿ ತ್ರೈಮಾಸಿಕಕ್ಕೆ ರೂ. 1.20 ಲಕ್ಷಗಳನ್ನು ಮುಂಗಡವಾಗಿ ಇಂಟರ್‌ನೆಟ್ ಬ್ಯಾಂಡ್ ವಿಡ್ತ್ ಶುಲ್ಕವಾಗಿ ಪಾವತಿಸುವುದಕ್ಕೆ.
5) ಯೋಜನೆಯ ಮುಖ್ಯ ಕಚೇರಿಯಲ್ಲಿ ಮತ್ತು ನಿಗಮದ ಕಚೇರಿಯಲ್ಲಿ ಅಗತ್ಯ ಸಿಬ್ಬಂದಿ ನೇಮಿಸಿ ಯೋಜನಾ ನಿರ್ವಹಣಾ ವ್ಯವಸ್ಥೆಯನ್ನು ನಿರ್ವಹಿಸಲು ಮಾಸಿಕ ರೂ. 80,000–00 ಗಳ ಶುಲ್ಕ ಪಾವತಿಸಬೇಕು ಮತ್ತು ಮಾಸಿಕ ರೂ. 50,000–00 ಗಳ ಹೋಸ್ಟಿಂಗ್ ವೆಚ್ಚವನ್ನು ಪಾವತಿಸುವುದಕ್ಕೆ.

ಮೂರು ಸರ್ವರ್‌ಗಳನ್ನು ಸ್ಥಾಪಿಸಲು ತಗಲುವ ವಾಸ್ತವಿಕ ವೆಚ್ಚ, ಒಂದು ಸಾರಿ ಅಳವಡಿಸುವಿಕೆ, ಕಸ್ಟಮೈಸೇಷನ್ ಮತ್ತು ಗರಿಷ್ಠ 25 ಬಳಕೆದಾರರ ತಂಡಕ್ಕೆ ಒಂದು ಬಾರಿ ತರಬೇತಿ ನೀಡುವುದಕ್ಕೆ ಪಾವತಿಸಬೇಕಾಗಿರುವ ಹಣವನ್ನು ಲೆಕ್ಕಶೀರ್ಷಿಕೆ "4210–01–110–1–86 (ಯೋ) ಪ್ರಾಜೆಕ್ಟ್ ನಿರ್ವಹಣೆ ಮತ್ತು ಮೌಲ್ಯಮಾಪನದಡಿ" ಮತ್ತು ಇಂಟರ್‌ನೆಟ್ ಬ್ಯಾಂಡ್ ವಿಡ್ತ್ ಶುಲ್ಕ ಹಾಗೂ ಮಾಸಿಕ ನಿರ್ವಹಣಾ ವೆಚ್ಚಗಳನ್ನು ಲೆಕ್ಕ ಶೀರ್ಷಿಕೆ "2210–06–800–0–84 (ಯೋ) 051 (ಸಾಮಾನ್ಯ ವೆಚ್ಚ)" ಅಡಿಯಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುಷಮಾ ಗೋಡಬೋಲೆ**
ಸರ್ಕಾರದ ಉಪ ಕಾರ್ಯದರ್ಶಿ, ಕೆಹೆಚ್‌ಎಸ್‌ಡಿಆರ್‌ಪಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್. 1052

**ವಿಷಯ:** ಕರ್ನಾಟಕ ಆರೋಗ್ಯ ವ್ಯವಸ್ಥೆ ಸುಧಾರಣಾ ಯೋಜನೆಯಡಿಯಲ್ಲಿ ಕಾರ್ಯ ಪ್ರವೃತ್ತರಾಗಿರುವ ಅಧೀಕ್ಷಕ ಅಭಿಯಂತರರ ವಿಭಾಗೀಯ, ಉಪ ವಿಭಾಗೀಯ ಶಾಖೆಗಳಲ್ಲಿನ ಅಧಿಕಾರಿಗಳಿಗೆ/ ಸಿಬ್ಬಂದಿಯವರಿಗೆ ಭಾರತ ಸಂಚಾರ ನಿಗಮ ನಿಯಮಿತ, ಬೆಂಗಳೂರು ಇವರಿಂದ ಸಿಯುಜಿ ನೆಟ್‌ವರ್ಕ್ ಯೋಜನೆಯಡಿಯಲ್ಲಿ ಸ್ವೀಕರಿಸಲಾದ–ಬಳಸಲಾಗುತ್ತಿರುವ ಸಿಮ್ ಕಾರ್ಡ್‌ಗಳ ನಿಗದಿತ ದರಗಳ ವೆಚ್ಚನ್ನು ಭರಿಸಲು ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಆಕುಕ/ಕಆವ್ಯಸುಯೋ/ಎಸ್.ಇ.ಸಿ.ಟಿ/01/–59/2007 ಬೆಂಗಳೂರು, ದಿನಾಂಕ; 18.12.2007.
2. ಸರ್ಕಾರಿ ಆದೇಶ ಸಂಖ್ಯೆ: HFW/KHSDRP/02/2007-08, ದಿನಾಂಕ: 07.08.2008.
3. ಸರ್ಕಾರಿ ಆದೇಶ ಸಂಖ್ಯೆ: HFW/KHSDRP/02/2007-08, ದಿನಾಂಕ: 22.10.2008.

**ಪ್ರಸ್ತಾವನೆ:**

ಉಲ್ಲೇಖಿತ ಸರ್ಕಾರದ ಆದೇಶದನ್ವಯ ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯಡಿಯಲ್ಲಿ, ಯೋಜನೆಯ ಎಲ್ಲಾ ಕಛೇರಿಗಳಲ್ಲಿರುವ ಹಾಗೂ ಇಲಾಖಾ ಅಧಿಕಾರಿ/ಸಿಬ್ಬಂದಿ/ಸಲಹೆಗಾರರಿಗೆ ಭಾರತ ಸಂಚಾರನಿಗಮ ನಿಯಮಿತ ಬೆಂಗಳೂರು ಇವರಿಂದ 325/– ಸಿಯುಜಿ ನೆಟ್‌ವರ್ಕ್ ಯೋಜನೆಯಡಿ ಮೊಬೈಲ್ ದೂರವಾಣಿ ಸಿಮ್ ಕಾರ್ಡ್‌ಗಳನ್ನು ಒದಗಿಸಲಾಗಿತ್ತು. ಓದು (1) ಮತ್ತು (2)ರ ಆದೇಶಗಳಲ್ಲಿ ಈ ಹಿಂದೆ ನೀಡಿರುವ ಮೊಬೈಲ್ ಸಿಮ್ ಕಾರ್ಡ್‌ಗಳ ಮಾಹೆಯಾನ ವೆಚ್ಚದ ಮಿತಿಯ ಬಗ್ಗೆ ಅಧಿಕಾರಿಗಳಿಗೆ ಸೂಕ್ತ ಆದೇಶಗಳನ್ನು ನೀಡಲಾಗಿತ್ತು. ಕೆಹೆಚ್‌ಎಸ್‌ಡಿಆರ್‌ಪಿ

ಹಾಗೂ ಎನ್‌ಆರ್‌ಹೆಚ್‌ಎಮ್ ಇವೆರಡೂ ವಿಲೀನಗೊಂಡಿದ್ದು, ಹೊಸ ಇಂಜಿನೀಯರಿಂಗ್ (ವಿಭಾಗೀಯ ಹಾಗೂ ಉಪವಿಭಾಗೀಯ ಕಛೇರಿಗಳು ಸೃಜಿಸಲಾಗಿದ್ದು, ಇನ್ನು ಕೆಲವು ಅಧಿಕಾರಿ/ಸಿಬ್ಬಂದಿಯವರಿಗೆ ಸಿಮ್ ಕಾರ್ಡ್‌ಗಳನ್ನು ನೀಡುವ ಬಗ್ಗೆ ಪ್ರಸ್ತಾಪಿಸಿದೆ. ಹಾಗೂ ಈ ಸಂಬಂಧ ಮಾಸಿಕ ದೂರವಾಣಿ ವೆಚ್ಚವನ್ನು ಯೋಜನೆಯ ವೆಚ್ಚದಿಂದ ಭರಿಸಲು ಪ್ರಸ್ತಾಪಿಸಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ/ಕಆವ್ಯಸುಯೋ/ಎಸ್‌ಇಸಿಟಿ–59/2007, ಬೆಂಗಳೂರು, ದಿನಾಂಕ: 17ನೇ ಮಾರ್ಚ್ 2009**

ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆ/ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ ವ್ಯಾಪ್ತಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಕೆಳಕಂಡ ಅಧಿಕಾರಿಗಳು/ಸಲಹೆಗಾರರು/ಸಿಬ್ಬಂದಿ ಇವರುಗಳಿಗೆ ಭಾರತ ಸಂಚಾರ ನಿಗಮ ನಿಯಮಿತ, ಸಿಯುಜಿ ನೆಟ್‌ವರ್ಕ್ (ಕ್ಲೋಸ್ಡ್ ಯೂಸರ್ ಗ್ರೂಪ್) ಯೋಜನೆಯಡಿಯಲ್ಲಿ ಲಗತ್ತಿಸಿರುವ ಅನುಬಂಧದಂತೆ–68 ಸಿಮ್‌ಕಾರ್ಡ್‌ಗಳನ್ನು ಒದಗಿಸಿದೆ. ಸಿಮ್‌ಕಾರ್ಡ್‌ನ ಬಳಕೆ ಮಾಹೆಯಾನ ರೂ. 525/– (ಐದು ನೂರ ಇಪ್ಪತ್ತೈದು) ಗಳಿಗೆ ಮಾತ್ರ ಸೀಮಿತಗೊಳಿಸಿದೆ. ಹಾಗೂ ದೂರವಾಣಿಗಳ ಮಾಸಿಕ ವೆಚ್ಚವನ್ನು ಪಾವತಿಸಲು ಸಹ ಸರ್ಕಾರ ಮಂಜೂರಾತಿ ನೀಡಿದೆ.

**ಅನುಬಂಧ**

**ಕ್ಲೋಸ್ಡ್ ಯೂಸರ್ ಗ್ರೂಪ್ (ಸಿ.ಯುಜಿ) ಪ್ಲಾನ್ – 525**

| ಕ್ರ. ಸಂ. | ಕಛೇರಿಯ ಹೆಸರು | ಬಳಕೆಗೆ ನಿಗಧಿ ಪಡಿಸುವ ಗರಿಷ್ಠ ಮೊತ್ತ | ಅಧಿಕಾರಿಗಳ ಪದನಾಮ | ಅಧಿಕಾರಿಗಳಿಗೆ ನೀಡಲಾಗಿರುವ ಸಂಖ್ಯೆ | ವಿತರಿಸಿದ ಸಿಮ್‌ಗಳ ಒಟ್ಟು ಸಂಖ್ಯೆ |
|---|---|---|---|---|---|
| 1 | ಅಧೀಕ್ಷಕ ಅಭಿಯಂತರರ ಕಾರ್ಯಲಯ, ಕೆಹೆಚ್‌ಎಸ್‌ಡಿಆರ್‌ಪಿ, ಬೆಂಗಳೂರು ಅಭಿಯಂತರರು/ಸಿಬ್ಬಂದಿ | ರೂ.525 | ಸಹಾಯಕ ಅಭಿಯಂತರರು–1 | 9449843288 | 4 |
| | | | ಸಹಾಯಕ ಅಭಿಯಂತರರು–2 | 9449843289 | |
| | | | ಸಹಾಯಕ ಅಭಿಯಂತರರು–3 | 9449843290 | |
| | | | ಸಹಾಯಕ ಅಭಿಯಂತರರು–4 | 9449843291 | |
| | | | ಕಿರಿಯ ವಿದ್ಯುತ್ ಅಭಿಯಂತರರು | 9449843292 | 1 |
| | | | ಕಿರಿಯ ಅಭಿಯಂತರರು–1 | 9449843293 | 2 |
| | | | ಕಿರಿಯ ಅಭಿಯಂತರರು–2 | 9449843294 | |
| | | | ಕಚೇರಿ ಅಧೀಕ್ಷಕರು | 9449843295 | 1 |
| | | | ನಕ್ಷೆಗಾರ | 9449843356 | 1 |
| | | | **ಒಟ್ಟು** | | **9** |
| 2 | ಕಾರ್ಯಪಾಲಕ ಅಭಿಯಂತರರ ಕಾರ್ಯಾಲಯ ವಿಭಾಗ, ಕೆಹೆಚ್‌ಎಸ್‌ಡಿಆರ್‌ಪಿ, ಬೆಂಗಳೂರು ಅಭಿಯಂತರರು/ಸಿಬ್ಬಂದಿ | ರೂ.525 | ಸಹಾಯಕ ಅಭಿಯಂತರರು–1 | 9449843296 | 2 |
| | | | ಸಹಾಯಕ ಅಭಿಯಂತರರು–2 | 9449843297 | |
| | | | ಸಲಕರಣಾ ಅಭಿಯಂತರರು | 9449843298 | 1 |
| | | | ಪರಿಸರ ಅಭಿಯಂತರರು | 9449843299 | 1 |
| | | | ಲೆಕ್ಕಧೀಕ್ಷಕರು | 9449843300 | 1 |
| | | | **ಒಟ್ಟು** | | **5** |
| 3 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಾರ್ಯಾಲಯ ಕೆಹೆಚ್‌ಎಸ್‌ಡಿಆರ್‌ಪಿ, ಬೆಂಗಳೂರು, ಉಪವಿಭಾಗ– ಅಭಿಯಂತರರು/ಸಿಬ್ಬಂದಿ | ರೂ.525 | ಸಹಾಯಕ ಅಭಿಯಂತರರು–1 | 9449843301 | 4 |
| | | | ಸಹಾಯಕ ಅಭಿಯಂತರರು–2 | 9449843302 | |
| | | | ಸಹಾಯಕ ಅಭಿಯಂತರರು–3 | 9449843303 | |
| | | | ಸಹಾಯಕ ಅಭಿಯಂತರರು–4 | 9449843304 | |
| | | | ಕಿರಿಯ ಅಭಿಯಂತರರು | 9449843305 | 1 |
| | | | **ಒಟ್ಟು** | | **5** |
| 4 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಾರ್ಯಾಲಯ ಕೆಹೆಚ್‌ಎಸ್‌ಡಿಆರ್‌ಪಿ, ಉಪವಿಭಾಗ–ಶಿವಮೊಗ್ಗ | ರೂ.525 | ಸಹಾಯಕ ಅಭಿಯಂತರರು–1 | 9449843306 | 4 |
| | | | ಸಹಾಯಕ ಅಭಿಯಂತರರು–2 | 9449843307 | |
| | | | ಸಹಾಯಕ ಅಭಿಯಂತರರು–3 | 9449843308 | |
| | | | ಸಹಾಯಕ ಅಭಿಯಂತರರು–4 | 9449843309 | |
| | | | **ಒಟ್ಟು** | | **4** |

| ಕ್ರ. ಸಂ. | ಕಛೇರಿಯ ಹೆಸರು | ಬಳಕೆಗೆ ನಿಗಧಿ ಪಡಿಸುವ ಗರಿಷ್ಠ ಮೊತ್ತ | ಅಧಿಕಾರಿಗಳ ಪದನಾಮ | ಅಧಿಕಾರಿಗಳಿಗೆ ನೀಡಲಾಗಿರುವ ಸಂಖ್ಯೆ | ವಿತರಿಸಿದ ಸಿಮ್‌ಗಳ ಒಟ್ಟು ಸಂಖ್ಯೆ |
|---|---|---|---|---|---|
| 5 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಾರ್ಯಾಲಯ ಕೆಹೆಚ್‌ಎಸ್‌ಡಿಆರ್‌ಪಿ, ವಿಭಾಗ – ಎನ್.ಪಿ.ಸಿ. ಆಸ್ಪತ್ರೆ ಆವರಣ ನಜರ್‌ಬಾದ್ ಮೈಸೂರು ಅಭಿಯಂತರರು/ಸಿಬ್ಬಂದಿ | ರೂ.525 | ಸಹಾಯಕ ಅಭಿಯಂತರರು–1 | 9449843310 | 1 |
| | | | ಸಲಕರಣಾ ಅಭಿಯಂತರರು | 9449843311 | 1 |
| | | | ಪರಿಸರ ಅಭಿಯಂತರರು | 9449843312 | 1 |
| | | | ಕಿರಿಯ ಅಭಿಯಂತರರು–1 | 9449843313 | 1 |
| | | | ಲೆಕ್ಕಧೀಕ್ಷಕರು | 9449843314 | 1 |
| | | | **ಒಟ್ಟು** | | **5** |
| 6 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಾರ್ಯಾಲಯ ಕೆಹೆಚ್‌ಎಸ್‌ಡಿಆರ್‌ಪಿ, ಉಪವಿಭಾಗ – ಎನ್.ಪಿ.ಸಿ. ಆಸ್ಪತ್ರೆ ಆವರಣ ನಜರ್‌ಬಾದ್ ಮೈಸೂರು ಅಭಿಯಂತರರು/ ಸಿಬ್ಬಂದಿ | ರೂ.525 | ಸಹಾಯಕ ಅಭಿಯಂತರರು–1 | 9449843315 | 2 |
| | | | ಸಹಾಯಕ ಅಭಿಯಂತರರು–2 | 9449843316 | |
| | | | ಕಿರಿಯ ಅಭಿಯಂತರರು–1 | 9449843317 | 2 |
| | | | ಕಿರಿಯ ಅಭಿಯಂತರರು–2 | 9449843318 | |
| | | | **ಒಟ್ಟು** | | **4** |
| 7 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಾರ್ಯಾಲಯ ಕೆಹೆಚ್‌ಎಸ್‌ಡಿಆರ್‌ಪಿ, ಉಪವಿಭಾಗ–ಹಾಸನ ಅಭಿಯಂತರರು /ಸಿಬ್ಬಂದಿ | ರೂ.525 | ಸಹಾಯಕ ಅಭಿಯಂತರರು–1 | 9449843319 | 5 |
| | | | ಸಹಾಯಕ ಅಭಿಯಂತರರು–2 | 9449843320 | |
| | | | ಸಹಾಯಕ ಅಭಿಯಂತರರು–3 | 9449843321 | |
| | | | ಸಹಾಯಕ ಅಭಿಯಂತರರು–4 | 9449843322 | |
| | | | ಸಹಾಯಕ ಅಭಿಯಂತರರು–5 | 9449843323 | |
| | | | **ಒಟ್ಟು** | | **5** |
| 8 | ಕಾರ್ಯಪಾಲಕ ಅಭಿಯಂತರರ ಕಾರ್ಯಾಲಯ ಕೆಹೆಚ್‌ಎಸ್‌ಡಿಆರ್‌ಪಿ, ವಿಭಾಗ–(ಶ್ರೀನಲಾರ್) ಧಾರವಾಡ ಅಭಿಯಂತರರು /ಸಿಬ್ಬಂದಿ | ರೂ.525 | ಸಲಕರಣಾ ಅಭಿಯಂತರರು | 9449843324 | 1 |
| | | | ಪರಿಸರ ಅಭಿಯಂತರರು | 9449843325 | 1 |
| | | | ಕಿರಿಯ ಅಭಿಯಂತರರು–1 | 9449843326 | 2 |
| | | | ಕಿರಿಯ ಅಭಿಯಂತರರು–2 | 9449843327 | |
| | | | ಲೆಕ್ಕಧೀಕ್ಷಕರು | 9449843328 | 1 |
| | | | **ಒಟ್ಟು** | | **5** |
| 9 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಾರ್ಯಾಲಯ ಕೆಹೆಚ್‌ಎಸ್‌ಡಿಆರ್‌ಪಿ, ಬೆಂಗಳೂರು ಉಪವಿಭಾಗ–(ಎ.ಎನ್.ಎಂ. ತರಬೇತಿ ಕೇಂದ್ರ) ಧಾರವಾಡ ಅಭಿಯಂತರರು/ಸಿಬ್ಬಂದಿ | ರೂ.525 | ಕಿರಿಯ ಅಭಿಯಂತರರು–1 | 9449843329 | 4 |
| | | | ಕಿರಿಯ ಅಭಿಯಂತರರು–2 | 9449843330 | |
| | | | ಕಿರಿಯ ಅಭಿಯಂತರರು–3 | 9449843331 | |
| | | | ಕಿರಿಯ ಅಭಿಯಂತರರು–4 | 9449843332 | |
| | | | **ಒಟ್ಟು** | | **4** |
| 10 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಾರ್ಯಾಲಯ ಕೆಹೆಚ್‌ಎಸ್‌ಡಿಆರ್‌ಪಿ, ಬೆಂಗಳೂರು ಉಪವಿಭಾಗ–ಬೆಳಗಾಂ, ಅಭಿಯಂತರರು /ಸಿಬ್ಬಂದಿ | ರೂ.525 | ಕಿರಿಯ ಅಭಿಯಂತರರು–1 | 9449843333 | 4 |
| | | | ಕಿರಿಯ ಅಭಿಯಂತರರು–2 | 9449843334 | |
| | | | ಕಿರಿಯ ಅಭಿಯಂತರರು–3 | 9449843335 | |
| | | | ಕಿರಿಯ ಅಭಿಯಂತರರು–4 | 9449843336 | |
| | | | **ಒಟ್ಟು** | | **4** |

| ಕ್ರ. ಸಂ. | ಕಛೇರಿಯ ಹೆಸರು | ಬಳಕೆಗೆ ನಿಗಧಿ ಪಡಿಸುವ ಗರಿಷ್ಠ ಮೊತ್ತ | ಅಧಿಕಾರಿಗಳ ಪದನಾಮ | ಅಧಿಕಾರಿಗಳಿಗೆ ನೀಡಲಾಗಿರುವ ಸಂಖ್ಯೆ | ವಿತರಿಸಿದ ಸಿಮ್‌ಗಳ ಒಟ್ಟು ಸಂಖ್ಯೆ |
|---|---|---|---|---|---|
| 11 | ಕಾರ್ಯಪಾಲಕ ಅಭಿಯಂತರರ ಕಾರ್ಯಲಯ, ಕೆಹೆಚ್‌ಎಸ್‌ಡಿಆರ್‌ಪಿ, ವಿಭಾಗ ಸರ್ಕಾರಿ ಆಸ್ಪತ್ರೆ ಆವರಣ, ಗುಲ್ಬರ್ಗಾ, ಅಭಿಯಂತರರು/ಸಿಬ್ಬಂದಿ | ರೂ.525 | ಸಹಾಯಕ ಅಭಿಯಂತರರು–1 | 9449843337 | 2 |
| | | | ಸಹಾಯಕ ಅಭಿಯಂತರರು–2 | 9449843338 | |
| | | | ಸಲಕರಣಾ ಅಭಿಯಂತರರು | 9449843339 | 1 |
| | | | ಪರಿಸರ ಅಭಿಯಂತರರು | 9449843340 | 1 |
| | | | ಲೆಕ್ಕಧೀಕ್ಷಕರು | 9449843341 | 1 |
| | | | **ಒಟ್ಟು** | | **5** |
| 12 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಾರ್ಯಾಲಯ ಕೆಹೆಚ್‌ಎಸ್‌ಡಿಆರ್‌ಪಿ, ವಿಭಾಗ ಸರ್ಕಾರಿ ಆಸ್ಪತ್ರೆ ಆರಣ, ಗುಲ್ಬರ್ಗಾ ಅಭಿಯಂತರರು/ಸಿಬ್ಬಂದಿ | ರೂ.525 | ಸಹಾಯಕ ಅಭಿಯಂತರರು–1 | 9449843342 | 4 |
| | | | ಸಹಾಯಕ ಅಭಿಯಂತರರು–2 | 9449843343 | |
| | | | ಸಹಾಯಕ ಅಭಿಯಂತರರು–3 | 9449843344 | |
| | | | ಸಹಾಯಕ ಅಭಿಯಂತರರು–4 | 9449843345 | |
| | | | **ಒಟ್ಟು** | | **4** |
| 13 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಾರ್ಯಾಲಯ ಕೆಹೆಚ್‌ಎಸ್‌ಡಿಆರ್‌ಪಿ, ಉಪವಿಭಾಗ ಒಫೆಕ್ ಆಸ್ಪತ್ರೆ ಆವರಣ, ರಾಯಚೂರು. | ರೂ.525 | ಸಹಾಯಕ ಅಭಿಯಂತರರು–1 | 9449843346 | 2 |
| | | | ಸಹಾಯಕ ಅಭಿಯಂತರರು–2 | 9449843347 | |
| | | | ಕಿರಿಯ ಅಭಿಯಂತರರು–1 | 9449843348 | 1 |
| | | | **ಒಟ್ಟು** | | **3** |
| 14 | ರಾಜ್ಯ ಯೋಜನಾ ನಿರ್ವಹಣ ಘಟಕದ ಕಾರ್ಯಲಯ (ಆ.ಕು.ಕ ನಿರ್ದೇಶನಾಲಯ ಆವರಣ ಆನಂದರಾವ್ ವೃತ್ತ ಬೆಂಗಳೂರು ಅಧಿಕಾರಿಗಳು/ಸಲಹೆಗಾರರು | ರೂ.525 | ಉಪ ನಿರ್ದೇಶಕರು (ಡೆಮೋಗ್ರಾಫ಼ರ್) | 9449843357 | 1 |
| | | | ಉಪನಿರ್ದೇಶಕರು (ಐಇಸಿ) | 9449843358 | 1 |
| | | | ರಾಜ್ಯ ಲೆಕ್ಕ ಪತ್ರ ವ್ಯವಸ್ಥಾಪಕರು | 9449843352 | 1 |
| | | | ಸಲಹೆಗಾರರು (ಆರ್‌ಸಿಎಚ್) | 9449843353 | 1 |
| | | | ಸಲಹೆಗಾರರು (ಮಕ್ಕಳ ಆರೋಗ್ಯ)(NRHM) | 9449843354 | 1 |
| | | | ಕಾನೂನು ಸಲಹೆಗಾರರು (NRHM) | 9449843355 | 1 |
| | | | **ಒಟ್ಟು** | | **6** |
| | | | | **ಒಟ್ಟು ಸಂಖ್ಯೆ** | **68** |

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2210–06–800–0–80–051" (ಸಾಮಾನ್ಯ ವೆಚ್ಚ) ಯಡಿಯಲ್ಲಿ 2007–08ನೇ ಸಾಲಿನಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಷಮಾ ಗೋಡಬೋಲೆ**

ಸರ್ಕಾರದ ಉಪ ಕಾರ್ಯದರ್ಶಿ, ಕೆಹೆಚ್‌ಎಸ್‌ಡಿಆರ್‌ಪಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್. 1053

**ವಿಷಯ:** ಡಾ: ಉಮಾಪಾರ್ವತಿ ಜಿ.ಜುಗನೂರ್, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಕೆರೂರ, ಬಾಗಲಕೋಟೆ ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ: ಜೆಆರ್‌ಒ (3) 36/ 2008–09 ದಿನಾಂಕ: 23.05.2008 ಮತ್ತು 02.01.2009

**ಪ್ರಸ್ತಾವನೆ:**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಮೇಲೆ ಓದಲಾದ ಪತ್ರದಲ್ಲಿ ಡಾ: ಉಮಾಪಾರ್ವತಿ ಜಿ.ಜುಗನೂರ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಕೆರೂರ, ಬಾಗಲಕೋಟೆ ಜಿಲ್ಲೆ ಇವರು ದಿನಾಂಕ: 12.09.2002 ರಂದು ಸರ್ಕಾರಿ ಸೇವೆಗೆ ಸೇರಿದ್ದು, ದಿನಾಂಕ: 17/05/2004 ರಿಂದ ಕರ್ತವ್ಯಕ್ಕೆ ಗೈರುಹಾಜರಿಯಾಗಿ ತಮ್ಮ ಮನವಿ ದಿನಾಂಕ:23.06.2004 ರಲ್ಲಿ ಹುದ್ದೆಗೆ ರಾಜೀನಾಮೆ ಸಲ್ಲಿಸಿದ್ದು, ಸದರಿಯವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ. ಹಾಗೂ ಸರ್ಕಾರಕ್ಕೆ ಯಾವುದೇ ಬಾಕಿ ಬರಬೇಕಾಗಿರುವುದಿಲ್ಲವಾದ್ದರಿಂದ ಸದರಿ ವೈದ್ಯರ ರಾಜೀನಾಮೆಯನ್ನು ಅಂಗೀಕರಿಸಲು ಕೋರಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 82 ಹೆಚ್‌ಎಸ್‌ಹೆಚ್ 2009, ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಡಾ: ಉಮಾಪಾರ್ವತಿ ಜಿ.ಜುಗನೂರ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಕೆರೂರ, ಬಾಗಲಕೋಟೆ ಜಿಲ್ಲೆ ಇವರು ತಮ್ಮ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆಯನ್ನು ದಿನಾಂಕ: 23.06.2004 ರಿಂದ ಅನ್ವಯವಾಗುವಂತೆ ಸರ್ಕಾರವು ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ. ಹೇಮನಾಥ್**

ಪಿ.ಆರ್. 1054

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1).

**ವಸತಿ ಸಚಿವಾಲಯ**

**ವಿಷಯ:** 2008–09ನೇ ಸಾಲಿನಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ನಾಲ್ಕನೇ ತ್ರೈಮಾಸಿಕ ಕಂತಿನ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ವಇ 22 ಕೊಮಂಲೆ 2008, ಬೆಂಗಳೂರು, ದಿನಾಂಕ: 23.06.2008.
2. ಸರ್ಕಾರದ ಆದೇಶ ಸಂಖ್ಯೆ:ವಇ 22 ಕೊಮಂಲೆ 2008, ಬೆಂಗಳೂರು, ದಿನಾಂಕ: 25.09.2008.
3. ಸರ್ಕಾರದ ಆದೇಶ ಸಂಖ್ಯೆ:ವಇ 22 ಕೊಮಂಲೆ 2008, ಬೆಂಗಳೂರು, ದಿನಾಂಕ: 22.12.2008.
4. ಆಯುಕ್ತರು, ಕಕೊನಿಮ, ಬೆಂಗಳೂರು ಇವರ ಪತ್ರ ಸಂಖ್ಯೆ:ಕಕೊನಿಮ/ಲೆಪಶಾ/ಅನುದಾನ: 2008–2009, ದಿನಾಂಕ: 04.02.2009.

**ಪ್ರಸಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಮೊದಲನೇ ತ್ರೈಮಾಸಿಕ ಕಂತಿನ ಅನುದಾನ ಯೋಜನೆಯಡಿಯಲ್ಲಿ ರೂ.62.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 784.735 ಲಕ್ಷಗಳು ಒಟ್ಟು ರೂ.847.235 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಕ್ರಮ ಸಂಖ್ಯೆ (2)ರಲ್ಲಿ ಎರಡನೇ ತ್ರೈಮಾಸಿಕ ಕಂತಿನ ಅನುದಾನ ಯೋಜನೆಯಡಿಯಲ್ಲಿ ರೂ.62.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ.775.385 ಲಕ್ಷಗಳು ಒಟ್ಟು ರೂ. 837.885 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಕ್ರಮ ಸಂಖ್ಯೆ (3)ರಲ್ಲಿ ಮೂರನೇ ತ್ರೈಮಾಸಿಕ ಕಂತಿನ ಅನುದಾನ ಯೋಜನೆಯಡಿಯಲ್ಲಿ ರೂ.62.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ.781.16449 ಲಕ್ಷಗಳು ಒಟ್ಟು ರೂ. 843.66449 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಕ್ರಮ ಸಂಖ್ಯೆ (3)ರಲ್ಲಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ರವರ ಪತ್ರದಲ್ಲಿ 2008–09ನೇ ಸಾಲಿನಲ್ಲಿ 4ನೇ ತ್ರೈಮಾಸಿಕ ಕಂತಿನ ಅನುದಾನ ಸಿಬ್ಬಂದಿ ವೆಚ್ಚಕ್ಕೆ ಕ್ರಮವಾಗಿ (ಯೋಜನೆ ಮತ್ತು ಯೋಜನೆತರಡಿ) ಒಟ್ಟು 128.125 ಲಕ್ಷಗಳು, ಹಾಗೂ ಹುಡ್ಕೋ ಸಾಲಗಳ ಮೇಲು ಉಸ್ತುವಾರಿ ರೂ.698.28 ಲಕ್ಷಗಳು ಒಟ್ಟು ಯೋಜನೆಯಡಿ ರೂ.62.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ.763.905 ಲಕ್ಷಗಳು ಒಟ್ಟು ರೂ.826.405 ಲಕ್ಷಗಳನ್ನು ಮಂಡಳಿಗೆ ಬಿಡುಗಡೆ ಮಾಡಲು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ವಿವಿಧ ಲೆಕ್ಕಶೀರ್ಷಿಕೆಗಳಡಿ ನಾಲ್ಕನೇ ತ್ರೈಮಾಸಿಕ ಕಂತಾಗಿ ಅನುದಾನವನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 22 ಕೊಮಂಲೆ 2008, ಬೆಂಗಳೂರು, ದಿನಾಂಕ: 24ನೇ ಮಾರ್ಚ್ 2009**

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ 2008–09ನೇ ಸಾಲಿಗೆ ನಾಲ್ಕನೇ ತ್ರೈಮಾಸಿಕ ಕಂತಾಗಿ ಅನುದಾನವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಗಳಾದ ಸಿಬ್ಬಂದಿ ವೆಚ್ಚ ಯೋಜನೆ ಮತ್ತು ಯೋಜನೇತರ ಹಾಗೂ ಹುಡ್ಕೋ ಸಾಲದ ಮೇಲು ಉಸ್ತುವಾರಿ (ಯೋಜನೇತರ)ಗಾಗಿ ರೂ.826.39755 ಲಕ್ಷ (ಎಂಟು ನೂರ ಇಪ್ಪತ್ತಾರು ಲಕ್ಷದ ಮತ್ತು ಮೂವ್ವತ್ತೊಂಬತ್ತು ಸಾವಿರದ ಏಳು ನೂರ ಐವತ್ತೈದು ರೂಪಾಯಿಗಳು ಮಾತ್ರ) ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಿ ಸರ್ಕಾರ ಆದೇಶಿಸಿದೆ.

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಲೆಕ್ಕ ಶೀರ್ಷಿಕೆ | ನಾಲ್ಕನೇ ತ್ರೈಮಾಸಿಕ | |
|---|---|---|---|
| | | ಯೋಜನೆ | ಯೋಜನೇತರ |
| 1 | ಸಿಬ್ಬಂದಿ ವೆಚ್ಚ<br>2217–04–191–2–01 | 62.50 | 65.62500 |
| 2 | ಹುಡ್ಕೋ ಸಾಲಗಳ ಮೇಲು ಉಸ್ತುವಾರಿ<br>4217–60–800–3–01 | – | 698.27255 |
| | **ಒಟ್ಟು** | **62.50** | **763.89755** |
| | **ಒಟ್ಟು ಮೊತ್ತ (ಯೋ + ಯೋಜನೇತರ)** | **826.39755** | |

ಈ ಹಣಕಾಸಿನ ಬಗ್ಗೆ ಈ ಕೆಳಕಂಡ ನಿಬಂಧನೆಗಳನ್ನು ವಿಧಿಸಿದೆ.

1. ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ, ಬೆಂಗಳೂರು ಇವರು ಹಣ ಬಿಡುಗಡೆ ಮಾಡುವ ಬಿಲ್ಲಿಗೆ ಮೇಲು ರುಜು ಮಾಡಲು ಅಧಿಕೃತವಾಗಿರುತ್ತದೆ.
2. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕವನ್ನು ಇಡತಕ್ಕದ್ದು.
3. ಯಾವ ಉದ್ದೇಶಕ್ಕಾಗಿ ಹಣ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಬಳಸತಕ್ಕದ್ದು.
4. ಪ್ರಸಕ್ತ ಸಾಲಿನಲ್ಲಿ ಬಿಡುಗಡೆ ಮಾಡಿದ ಹಣಕಾಸಿನ ಮೊತ್ತಕ್ಕೆ ಬಳಕೆ ಪ್ರಮಾಣ ಪತ್ರವನ್ನು ಮಹಾಲೇಖಪಾಲರು, ಕರ್ನಾಟ, ಬೆಂಗಳೂರು ಇವರಿಗೆ ಕಳುಹಿಸಿ ಅದರ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ:ಎಫ್‌ಡಿ 83 ವೆಚ್ಚ–9/2009, ದಿನಾಂಕ: 13.03.2009ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1070 **ಜಿ.ಆರ್. ನಾಗರಾಜ**

ಪೀಠಾಧಿಕಾರಿ–4, ವಸತಿ ಇಲಾಖೆ.

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಲಾ 47 ಎಲ್‌ಸಿಇ 2004 (P), ಬೆಂಗಳೂರು, ದಿನಾಂಕ: 8ನೇ ಏಪ್ರಿಲ್ 2009**

ಸರ್ಕಾರಿ ಆದೇಶದ ಸಂಖ್ಯೆ: ಲಾ 47 ಎಲ್‌ಸಿಇ 2004, ದಿನಾಂಕ: 23.06.2005ರಲ್ಲಿನ ಕ್ರಮ ಸಂಖ್ಯೆ: 5ರಲ್ಲಿ ನಮೂದಿಸಲಾಗಿರುವ "ಬೆಂಗಳೂರಿನಲ್ಲಿ 3 ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ (ಸಂಚಾರಿ) ನ್ಯಾಯಾಲಯಗಳು ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ನ್ಯಾಯಾಲಯ" ಎಂದು ನಮೂದಿಸಲಾಗಿರುವುದರ ಬದಲಾಗಿ "ಬೆಂಗಳೂರಿನಲ್ಲಿ 3 ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ (ಸಂಚಾರಿ) ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ನ್ಯಾಯಾಲಯ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇ. ಶಿವಾನಂದ**

ಪಿ.ಆರ್. 501 ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಗ್ರಾಅಪ 6 ಎಸ್‌ಜಿವೈ ಡಿಆರ್‌ಡಿಎ 2007, ಬೆಂಗಳೂರು, ದಿನಾಂಕ: 21ನೇ ಮಾರ್ಚ್ 2009**

ಸರ್ಕಾರದ ಆದೇಶಗಳ ಸಮಸಂಖ್ಯೆ ದಿನಾಂಕ: 24.01.2009 ರಲ್ಲಿ ಬೆಂಗಳೂರು ಗ್ರಾಮಾಂತರ, ಬಿಜಾಪುರ ಹಾಗೂ 28.02.2009 ಗುಲ್ಬರ್ಗಾ ಮತ್ತು ಕೊಪ್ಪಳ ಜಿಲ್ಲಾ ಪಂಚಾಯತಿಗಳಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ರಾಜ್ಯದ ಪಾಲಿನ ಅನುದಾನ ಬಿಡುಗಡೆ ಮಾಡಿದ್ದ ಆದೇಶದ ಷರತ್ತಿನಲ್ಲಿರುವ ಲೆಕ್ಕ ಶೀರ್ಷಿಕೆ ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ : "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–06 ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ–(ಕೇಂದ್ರ ಪುರಸ್ಕೃತ ಯೋಜನೆ) 2008–2009 (2515–00–196–6–06)" ರಲ್ಲಿ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಜಡ್‌ಪಿಎ 2003 ದಿನಾಂಕ: 08.09.2004 ಮತ್ತು 14.07.2005 ರನ್ವಯ ಜಿಲ್ಲಾ ಪಂಚಾಯತ್ ನಿಧಿಗೆ ಜಮೆ ಮಾಡಿಕೊಂಡು ಭರಿಸತಕ್ಕದ್ದು ಎಂಬುದರ ಬದಲಿಗೆ –

ಯೋಜನೆಯ ವೆಚ್ಚವನ್ನು ಲೆಕ್ಕಶಿಷೀಕೆ : "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳ 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ–(ಕೇಂದ್ರ ಪುರಸ್ಕೃತ ಯೋಜನೆ) 2008–2009 (2515–00–196–6–06)" ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ 1 ಜಡ್‌ಪಿಎ 2007 (ಪಿ2) ದಿನಾಂಕ: 26.04.2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ–1ಕ್ಕೆ ಜಮೆ ಮಾಡಿಕೊಂಡು ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಶಮ್ಲಾ ಇಕ್ಬಾಲ್**

ಪಿ.ಆರ್. 1071 ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** 2008–09ನೇ ಸಾಲಿಗೆ ಎಸ್‌ಜಿಎಸ್‌ವೈ ಎರಡನೇ ಕಂತಿನ ರಾಜ್ಯದ ಪಾಲಿನ ಅನುದಾನವನ್ನು ರಾಜ್ಯದ 3 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/1/2008 ಎಸ್‌ಜಿಎಸ್‌ವೈ–I (12) ದಿನಾಂಕ: 02.04.08, (39) ದಿನಾಂಕ: 22.05.08 ಮತ್ತು (63) ದಿನಾಂಕ: 26.06.08.
2. ರಾಜ್ಯ ಸರ್ಕಾರದ ಆದೇಶ ಸಮ ಸಂಖ್ಯೆ ದಿನಾಂಕ: 12.05.08 ಮತ್ತು 29.07.08.
3. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ:ಜೆ 12022/1/2008 ಎಸ್‌ಜಿಎಸ್‌ವೈ–I (126) ದಿನಾಂಕ: 18.12.08, (146) ದಿನಾಂಕ 14.01.09, (171) ದಿನಾಂಕ: 28.01.09, (183) ದಿನಾಂಕ:09.02.09 ಮತ್ತು (198) ದಿನಾಂಕ: 18.02.09.
4. ರಾಜ್ಯ ಸರ್ಕಾರದ ಆದೇಶ ಸಮ ಸಂಖ್ಯೆ ದಿನಾಂಕ: 30.01.09, 16.02.09 ಮತ್ತು 02.03.09.
5. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ:ಜೆ 12022 / 1 / 2008 ಎಸ್‌ಜಿಎಸ್‌ವೈ–I (226) ದಿನಾಂಕ: 12.03.09 ಮತ್ತು (227) ದಿನಾಂಕ: 12.03.09.
6. ಸರ್ಕಾರದ ಆದೇಶದ ಸಂಖ್ಯೆ ಗ್ರಾಅಪ 65 ಎಸ್‌ಜೆವೈ 2008 ದಿನಾಂಕ: 11.03.09.
7. ಸರ್ಕಾರದ ಆದೇಶದ ಸಂಖ್ಯೆ ಗ್ರಾಅಪ 65 ಎಸ್‌ಜೆವೈ 2008 ದಿನಾಂಕ: 19.03.09.

**ಪ್ರಸಾವನೆ:**

2008–09ನೇ ಸಾಲಿನಲ್ಲಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಕೇಂದ್ರ ಸರ್ಕಾರವು ಓದಲಾಗಿದೆ (1) ರಲ್ಲಿ ಒಂದನೇ ಕಂತಿನ ಅನುದಾನವಾಗಿ ಒಟ್ಟು ರೂ.40,08,44,000 ಗಳನ್ನು ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಿದ್ದು, ಇದರನ್ವಯ ಓದಲಾಗಿದೆ (2) ರನ್ವಯ ರಾಜ್ಯ ಸರ್ಕಾರವು ಆಯವ್ಯದಲ್ಲಿ ಜಿಲ್ಲೆಗಳಿಗೆ ಲಭ್ಯವಿರುವ ಅನುದಾನದಂತೆ ತನ್ನ ಪಾಲಿನ ಮೊದಲನೇ ಕಂತಿನ ಅನುದಾನ ರೂ.13,21,59,000 ಬಿಡುಗಡೆ ಮಾಡಲಾಗಿದೆ. ಓದಲಾಗಿದೆ (3) ರಲ್ಲಿನ ದಿನಾಂಕಗಳಲ್ಲಿ ಕೇಂದ್ರ ಸರ್ಕಾರ ಈ ಯೋಜನೆಗೆ ರಾಜ್ಯದ 26 ಜಿಲ್ಲೆಗಳಿಗೆ ಎರಡನೇ ಕಂತಿನ ಅನುದಾನವಾಗಿ ಒಟ್ಟು ರೂ.27,96,44,000 ಗಳನ್ನು ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯ ಸರ್ಕಾರವು ಆಯವ್ಯಯದಲ್ಲಿ ಜಿಲ್ಲೆಗೆ ಲಭ್ಯವಿರುವ ಅನುದಾನದ ಆಧಾರದ ಮೇಲೆ ಓದಲಾಗಿದೆ (4) ರ ಆದೇಶದಲ್ಲಿ ತನ್ನ ಪಾಲಿನ ಎರಡನೇ ಕಂತಿನ ಅನುದಾನ ರೂ.8,86,39,000 ಗಳನ್ನು ಬಿಡುಗಡೆ ಮಾಡಿದೆ.

ಓದಲಾಗಿದೆ (5)ರ ಪತ್ರಗಳಲ್ಲಿ ಕೇಂದ್ರ ಸರ್ಕಾರ ಎಸ್‌ಜಿಎಸ್‌ವೈಯಡಿ ರಾಜ್ಯದ ಕೋಲಾರ ಮತ್ತು ರಾಮನಗರ ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತಿನ ಅನುದಾನವಾಗಿ ಒಟ್ಟು ರೂ.1,26,93,000 ಗಳನ್ನು ಹಾಗೂ ಉತ್ತರ ಕನ್ನಡ ಜಿಲ್ಲಾ ಪಂಚಾಯತಿಗೆ ಕಡಿತಗೊಳಿಸಿದ್ದ ಅನುದಾನವನ್ನು ಪೂರ್ವಸ್ಥಿತಿಗೆ ತಂದು ರೂ.23,38,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ಕೋಲಾರ, ರಾಮನಗರ ಮತ್ತು ಉತ್ತರ ಕನ್ನಡ ಜಿಲ್ಲಾ ಪಂಚಾಯತಿಗಳಿಗೆ ರಾಜ್ಯ ಸರ್ಕಾರವು ರೂ.50,10,000 ನೀಡಬೇಕಾಗಿದ್ದು, ರಾಜ್ಯದ ಆಯವ್ಯಯದಲ್ಲಿ ಕೋಲಾರ ಜಿಲ್ಲಾ ಪಂಚಾಯತಿಗೆ ರೂ.6,79,000 ಮಾತ್ರ ಲಭ್ಯವಿದ್ದು, ರಾಮನಗರ ಜಿಲ್ಲಾ ಪಂಚಾಯತಿಗೆ ಯಾವುದೇ ಅನುದಾನ ಲಭ್ಯವಿರುವುದಿಲ್ಲ. ಆದ ಕಾರಣ ಈ ಜಿಲ್ಲೆಗಳಿಗೆ ಓದಲಾಗಿದೆ (7) ರ ಆದೇಶದಲ್ಲಿ ಪುನರ್ವಿನಿಯೋಗದ ಮೂಲಕ ಅನುದಾನವನ್ನು ಭರಿಸಲಾಗಿದೆ. ಕೋಲಾರ, ರಾಮನಗರ ಮತ್ತು ಉತ್ತರ ಕನ್ನಡ ಜಿಲ್ಲಾ ಪಂಚಾಯತಿಗಳಿಗೆ ರಾಜ್ಯ ಸರ್ಕಾರವು ರೂ.50,10,000ನ್ನು ಬಿಡುಗಡೆ ಮಾಡಬೇಕಾದ ಕಾರಣ ಈ ಆದೇಶ:

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 32 ಎಸ್‌ಜಿವೈ 2008, ಬೆಂಗಳೂರು, ದಿನಾಂಕ: 21ನೇ ಮಾರ್ಚ್ 2009**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ರಾಜ್ಯ ಸರ್ಕಾರವು ತನ್ನ ಪಾಲಿನ ಎರಡನೇ ಕಂತಿನ ಅನುದಾನವನ್ನು ಈ ಕೆಳಗೆ ತೋರಿಸಿರುವಂತೆ ಕೋಲಾರ, ರಾಮನಗರ ಮತ್ತು ಉತ್ತರ ಕನ್ನಡ ಜಿಲ್ಲಾ ಪಂಚಾಯತಿಗಳಿಗೆ ಒಟ್ಟು ರೂ.50,10,000 ಗಳನ್ನು (ರೂ.ಐವತ್ತು ಲಕ್ಷದ ಹತ್ತು ಸಾವಿರ ಮಾತ್ರ) ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ. ಸಂ. | ಜಿ.ಪಂ. ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಎರಡನೇ ಕಂತಿನ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡಬೇಕಾದ ಎರಡನೇ ಕಂತಿನ ಅನುದಾನ |
|---|---|---|---|---|---|
| 1 | ಕೋಲಾರ | 404 | 0700ZZ8002 | 33,46,000 | 11,15,000 |
| 2 | ರಾಮನಗರ | 452 | 0400ZZ0001 | 93,47,000 | 31,16,000 |
| 3 | ಉತ್ತರ ಕನ್ನಡ | 416 | 3000ZZ0080 | 23,38,000 | 7,79,000 |
| | | **ಒಟ್ಟು** | | **1,50,31,000** | **50,10,000** |

**ಷರತ್ತುಗಳು:**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯದ ನಡುವೆ 75 : 25 ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2501 – ಗ್ರಾಮೀಣಾಭಿವೃದ್ಧಿ ವಿಶೇಷ ಕಾರ್ಯಕ್ರಮಗಳ–01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198–ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6–ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2008–09 (2501–01–198–6–01) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ: 14.07.2005 ರನ್ವಯ ಖಜಾನೆಯಿಂದ ಪಡೆಯುವುದು.

ಕೋಲಾರ, ರಾಮನಗರ ಮತ್ತು ಉತ್ತರ ಕನ್ನಡ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ: ಗ್ರಾಅಪ 14 ಎಸ್ ಜೆ ವೈ 2007 ದಿನಾಂಕ: 18.04.2007 ರ ಸೂಚನೆಯಂತೆ ಕ್ರಮ ಕೈಗೊಳ್ಳುವುದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2008–09ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ onlineಗೆ upload ಮಾಡಿ ಪ್ರತಿಯನ್ನು ಸ್ವ ಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಕೋಲಾರ, ರಾಮನಗರ ಮತ್ತು ಉತ್ತರ ಕನ್ನಡ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 105 ಪಿಬಿಎಸ್ 2009 ದಿನಾಂಕ: 19.03.2009 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಶಮ್ಲಾ ಇಕ್ಬಾಲ್**

ಪಿ.ಆರ್. 1072

ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** ಡಿಆರ್‌ಡಿಎ ಆಡಳಿತ ಲೆಕ್ಕ ಶೀರ್ಷಿಕೆ 2515–00–196–6–06 ಯಡಿ ಅನುದಾನವನ್ನು ಪುನರ್ವಿನಿಯೋಗದ ಮೂಲಕ ಭರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 9 ಟಿಎಫ್‌ಪಿ 2005 ದಿನಾಂಕ: 07.04.2005.

2. ಸರ್ಕಾರದ ಆದೇಶದ ಸಮ ಸಂಖ್ಯೆ ದಿನಾಂಕ : 07.03.2009 ಮತ್ತು ತಿದ್ದುಪಡಿ ಆದೇಶ ಸಮ ಸಂಖ್ಯೆ ದಿನಾಂಕ: 09.03.2009.
3. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 7 ಎಸ್‌ಜೆವೈ (ಡಿಆರ್‌ಡಿಎ) 2008, ಬೆಂಗಳೂರು ದಿನಾಂಕ: 18.12.2008.
4. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 6 ಎಸ್‌ಜೆವೈ (ಡಿಆರ್‌ಡಿಎ) 2007, ಬೆಂಗಳೂರು ದಿನಾಂಕ: 24.03.2008.
5. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 6 ಎಸ್‌ಜೆವೈ (ಡಿಆರ್‌ಡಿಎ) 2007, ಬೆಂಗಳೂರು ದಿನಾಂಕ: 28.2.2009.
6. ಸರ್ಕಾರದ ಕಾರ್ಯದರ್ಶಿಗಳು, ಗ್ರಾಅಪಂರಾ ಇಲಾಖೆ ಇವರ ಅ.ಸ. ಪತ್ರ ಸಂಖ್ಯೆ ಗ್ರಾಅಪ 51 ಎಸ್‌ಜೆವೈ 2008 ದಿನಾಂಕ: 18.03.2009.

**ಪ್ರಸ್ತಾವನೆ:**

ಡಿಆರ್‌ಡಿಎ (ಆಡಳಿತ) ಯೋಜನೆಯ ಲೆಕ್ಕ ಶೀರ್ಷಿಕೆ 2515–00–196–6–06 ಯಡಿ 2008–2009ನೇ ಸಾಲಿಗೆ ರಾಜ್ಯದ ಆಯವ್ಯಯದಲ್ಲಿ ರಾಜ್ಯದ ಪಾಲಿನ ಅನುದಾನ ರೂ.559.76 ಲಕ್ಷಗಳನ್ನು ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತಿಗಳಿಗೆ ಹಂಚಿಕೆ ಮಾಡಿದೆ. ಡಿಆರ್‌ಡಿಎ ಆಡಳಿತ ಯೋಜನೆ ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಜಿಲ್ಲೆಯ ಆಡಳಿತಾತ್ಮಕ ವೆಚ್ಚ ಭರಿಸಲು ಯೋಜನೆಯ ಮಾರ್ಗ ಸೂಚಿ ಕಂಡಿಕೆ 3.5 ರನ್ವಯ ಜಿಲ್ಲೆಗಳಲ್ಲಿನ ತಾಲ್ಲೂಕುಗಳ ಆಧಾರದ ಮೇಲೆ ಕೇಂದ್ರ ಸರ್ಕಾರ ಅನುದಾನವನ್ನು ಬಿಡುಗಡೆ ಮಾಡುತ್ತದೆ. ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಅನುದಾನ ಬಿಡುಗಡೆ ಮಾಡಬೇಕಾಗಿದೆ. ಜಿಲ್ಲಾ ಪಂಚಾಯತಿಗಳಿಗೆ ಕೇಂದ್ರ ಸರ್ಕಾರದ ನಿಗದಿತ ಅನುದಾನಕ್ಕಿಂತ ಹೆಚ್ಚುವರಿ ಅನುದಾನ ಅವಶ್ಯವಿದ್ದಲ್ಲಿ, ಮಾರ್ಗಸೂಚಿ ಕಂಡಿಕೆ 3.3 ರನ್ವಯ ಹೆಚ್ಚುವರಿ ಅನುದಾನವನ್ನು ರಾಜ್ಯ ಸರ್ಕಾರವೇ ಭರಿಸಬೇಕಾಗುತ್ತದೆ. ಈ ಕಾರಣದಿಂದ, ಕೆಲವೊಂದು ಜಿಲ್ಲಾ ಪಂಚಾಯತಿಗಳಲ್ಲಿ ಆಡಳಿತಾತ್ಮಕ ವೆಚ್ಚ ಭರಿಸಲು ಅನುದಾನದ ಕೊರತೆ ಉಂಟಾಗಿದ್ದು, ಇದನ್ನು ರಾಜ್ಯ ಸರ್ಕಾರ ಭರಿಸಬೇಕಾದುದರಿಂದ, ಓದಲಾಗಿದೆ (2) ರನ್ವಯ ಪುರ್ನವಿನಿಯೋಗದ ಮೂಲಕ ಭರಿಸಲು ಆದೇಶ ಹೊರಡಿಸಲಾಗಿದೆ. ಓದಲಾಗಿದೆ (3) ರಲ್ಲಿ ಗದಗ್ ಜಿಲ್ಲಾ ಪಂಚಾಯತಿಗೆ ರಾಜ್ಯದ ಆಯವ್ಯಯದಲ್ಲಿ ಅನುದಾನದ ಲಭ್ಯತೆ ಆಧಾರದ ಮೇಲೆ ರೂ.8,30,000 ರ ಬದಲು ರೂ.7,69,000 ಬಿಡುಗಡೆ ಮಾಡಲಾಗಿತ್ತು. ಉಳಿದ ಅನುದಾನ ರೂ.61,000 ಬಿಡುಗಡೆ ಮಾಡಬೇಕಾಗಿದೆ. ಗುಲ್ಬರ್ಗಾ ಜಿಲ್ಲಾ ಪಂಚಾಯತಿಗೆ ಕೇಂದ್ರ ಸರ್ಕಾರ 2008–09ನೇ ಸಾಲಿನ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡುವಾಗ 2007–08ನೇ ಸಾಲಿನ ರಾಜ್ಯದ ಪಾಲಿನ ಅನುದಾನವನ್ನು ಓದಲಾಗಿದೆ (4)ರ ಆದೇಶದಲ್ಲಿ ಬಿಡುಗಡೆ ಮಾಡಿದ್ದ ಅನುದಾನವನ್ನು ಖಜಾನೆಯಿಂದ ಸೆಳೆಯದ ಕಾರಣ ಕಡಿತಗೊಳಿಸಿ ಬಿಡುಗಡೆ ಮಾಡಿದೆ. ಆದ ಕಾರಣ, ಗುಲ್ಬರ್ಗಾ ಜಿಲ್ಲಾ ಪಂಚಾಯತಿಗೆ ರೂ. 11,12,000 ಗಳನ್ನು ಓದಲಾಗಿದೆ (5) ರಲ್ಲಿ ಬಿಡುಗಡೆ ಮಾಡಲಾಗಿದ್ದು, ಉಳಿಕೆ ಅನುದಾನ ರೂ. 12,88,000 ಗಳನ್ನು ಈಗ ಬಿಡುಗಡೆ ಮಾಡಬೇಕಾಗಿದೆ. 2007–08ನೇ ಸಾಲಿನಲ್ಲಿ ರಾಯಚೂರು ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿದ್ದ ರಾಜ್ಯದ ಪಾಲಿನ ಅನುದಾನ ರೂ.4,87,000 ಖಜಾನೆಯಿಂದ ಸೆಳೆಯದಿದ್ದ ಕಾರಣ, ಸದರಿ ಸಾಲಿನಲ್ಲಿ ಬಿಡುಗಡೆ ಮಾಡುತ್ತಿರುವ ರೂ. 18,02,000 ಗಳಲ್ಲಿ ರೂ.4,87,000 ಗಳನ್ನು ಒಳಗೊಂಡಂತೆ ಬಿಡುಗಡೆ ಮಾಡಬೇಕಾಗಿದೆ. ಈ ಎಲ್ಲಾ ಕಾರಣಗಳಿಂದ, ಬಾಗಲಕೋಟೆ, ಬೆಂಗಳೂರು ನಗರ, ಬೀದರ್, ಚಿತ್ರದುರ್ಗ, ಧಾರವಾಡ, ಹಾವೇರಿ, ಚಾಮರಾಜನಗರ, ಚಿಕ್ಕಮಗಳೂರು ಮತ್ತು ಉತ್ತರ ಕನ್ನಡ ಜಿಲ್ಲಾ ಪಂಚಾಯತ್‌ಗಳಲ್ಲಿ ಉಳಿತಾಯ ಮಾಡಬಹುದಾದ ಅನುದಾನವನ್ನು ಪುನರ್ವಿನಿಯೋಗದ ಮೂಲಕ ಬಿಜಾಪುರ, ಬಳ್ಳಾರಿ, ದಾವಣಗೆರೆ, ದಕ್ಷಿಣ ಕನ್ನಡ, ಗುಲ್ಬರ್ಗಾ, ಗದಗ್, ಮಂಡ್ಯ, ಮೈಸೂರು, ರಾಯಚೂರು, ಶಿವಮೊಗ್ಗ ಮತ್ತು ತುಮಕೂರು ಜಿಲ್ಲಾ ಪಂಚಾಯತಿಗಳಿಗೆ ನೀಡಲು ಸರ್ಕಾರದ ಕಾರ್ಯದರ್ಶಿಗಳು, ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರು ಓದಲಾಗಿದೆ (2)ರ ಆದೇಶದಲ್ಲಿ ಒಪ್ಪಿರುತ್ತಾರೆ. ಇದಲ್ಲದೆ ಈ 11 ಜಿಲ್ಲೆಗಳಿಗೆ ಡಿಆರ್‌ಡಿಎ ಮಾರ್ಗಸೂಚಿಯನ್ವಯ ಅರ್ಹತೆಯಿರುವಷ್ಟು ಅನುದಾನವನ್ನು ನೀಡುವಂತೆ ಓದಲಾಗಿದೆ (6) ರಲ್ಲಿ ಕೇಂದ್ರ ಸರ್ಕಾರವನ್ನು ಕೋರಲಾಗಿದೆ. ಈ ಅನುದಾನದ ನಿರೀಕ್ಷೆಯ ಮೇರೆಗೆ ರಾಜ್ಯದ ಪಾಲಿನ ಅನುದಾನ ರೂ.1,10,43,000 ಗಳನ್ನು ಬಿಡುಗಡೆ ಮಾಡಬೇಕಾದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 1 ಎಸ್‌ಜೆವೈ (ಡಿಆರ್‌ಡಿಎ) 2008(ಪಿ) ಬೆಂಗಳೂರು, ದಿನಾಂಕ: 21ನೇ ಮಾರ್ಚ್ 2009**

ಡಿಆರ್‌ಡಿಎ (ಆಡಳಿತ) ಯೋಜನೆಯ ಲೆಕ್ಕ ಶೀರ್ಷಿಕೆ 2515–00–196–6–06 ಯಡಿ 2008–2009ನೇ ಸಾಲಿಗೆ ರಾಜ್ಯ ಸರ್ಕಾರವು ಪುನರ್ವಿನಿಯೋಗದ ಮೂಲಕ ಬಿಜಾಪುರ, ಬಳ್ಳಾರಿ, ದಾವಣಗೆರೆ, ದಕ್ಷಿಣ ಕನ್ನಡ, ಗುಲ್ಬರ್ಗಾ, ಗದಗ್, ಮಂಡ್ಯ, ಮೈಸೂರು, ರಾಯಚೂರು, ಶಿವಮೊಗ್ಗ ಮತ್ತು ತುಮಕೂರು ಜಿಲ್ಲಾ ಪಂಚಾಯತಿಗಳಿಗೆ ರೂ. 1,10,43,000 ಗಳನ್ನು (ರೂ.ಒಂದು ಕೋಟಿ ಹತ್ತು ಲಕ್ಷದ ನಲವತ್ತು ಮೂರು ಸಾವಿರ ಮಾತ್ರ) ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ. ಸಂ. | ಜಿಲ್ಲಾ ಪಂಚಾಯತ್ ಹೆಸರು | ಜಿ. ಪಂ ಕೋಡ್ | ಡಿ.ಡಿ.ಓ ಕೋಡ್ | ಪುನರ್ವಿನಿಯೋಗದ ನಂತರ ಬಿಡುಗಡೆ ಮಾಡಿದ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | ಬಳ್ಳಾರಿ | 418 | 3400ZZ0001 | 11,33,000 |
| 2 | ಬಿಜಾಪುರ | 414 | 2800ZZ9152 | 10,00,000 |
| 3 | ದಕ್ಷಿಣ ಕನ್ನಡ | 409 | 1900zz0047 | 3,12,000 |
| 4 | ದಾವಣಗೆರೆ | 451 | 1700ZZ0002 | 7,63,000 |
| 5 | ಗದಗ್ | 462 | 2600ZZ0001 | 61,000 |
| 6 | ಗುಲ್ಬರ್ಗಾ | 417 | 3200ZZ0003 | 12,88,000 |
| 7. | ಮಂಡ್ಯ | 412 | 1100ZZ0001 | 11,00,000 |
| 8. | ಮೈಸೂರು | 407 | 0900ZZ0001 | 16,82,000 |
| 9. | ರಾಯಚೂರು | 420 | 3600ZZ0001 | 18,02,000 |
| 10. | ಶಿವಮೊಗ್ಗ | 405 | 1400ZZ0002 | 4,00,000 |
| 11. | ತುಮಕೂರು | 406 | 0800ZZ0001 | 15,02,000 |
| | | | **ಒಟ್ಟು ರೂ.** | **1,10,43,000** |

**ಷರತ್ತುಗಳು:**

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಜಿಲ್ಲಾ ಪಂಚಾಯತ್‌ಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇನ್ಯಾವುದೇ ಉದ್ದೇಶಗಳಿಗೆ ಉಪಯೋಗಿಸತಕ್ಕದ್ದಲ್ಲ.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯಗಳ ನಡುವೆ 75:25 ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಲೆಕ್ಕ ಶೀರ್ಷಿಕೆ : "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ– (ಕೇಂದ್ರ ಪುರಸ್ಕೃತ ಯೋಜನೆ) 2008–2009 (2515–00–196–6–06)" ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ 1 ಜಡ್‌ಪಿಎ 2007 (ಪಿ2) ದಿನಾಂಕ 26.04.2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ–1ಕ್ಕೆ ಜಮೆ ಮಾಡಿಕೊಂಡು ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಬಳ್ಳಾರಿ, ಬಿಜಾಪುರ, ದಕ್ಷಿಣ ಕನ್ನಡ, ದಾವಣಗೆರೆ, ಗದಗ್, ಗುಲ್ಬರ್ಗಾ, ಮಂಡ್ಯ, ಮೈಸೂರು, ರಾಯಚೂರು, ಶಿವಮೊಗ್ಗ ಮತ್ತು ತುಮಕೂರು ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಬಳ್ಳಾರಿ, ಬಿಜಾಪುರ, ದಕ್ಷಿಣ ಕನ್ನಡ, ದಾವಣಗೆರೆ, ಗದಗ್, ಗುಲ್ಬರ್ಗಾ, ಮಂಡ್ಯ, ಮೈಸೂರು, ರಾಯಚೂರು, ಶಿವಮೊಗ್ಗ ಮತ್ತು ತುಮಕೂರು ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳು ಆಯಾ ಮಾಹೆಯ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು {ಸ್ವಉಕಾ}, ಗ್ರಾಮೀಣಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಬಳ್ಳಾರಿ, ಬಿಜಾಪುರ, ದಕ್ಷಿಣ ಕನ್ನಡ, ದಾವಣಗೆರೆ, ಗದಗ್, ಗುಲ್ಬರ್ಗಾ, ಮಂಡ್ಯ, ಮೈಸೂರು, ರಾಯಚೂರು, ಶಿವಮೊಗ್ಗ ಮತ್ತು ತುಮಕೂರು ಜಿಲ್ಲಾ ಪಂಚಾಯತ್‌ಗಳ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು, ನಿರ್ದೇಶಕರು {ಸ್ವಉಕಾ} ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಶಮ್ಲಾ ಇಕ್ಬಾಲ್**

ಪಿ.ಆರ್. 1073

ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** 2007–08ನೇ ಸಾಲಿನ ಆಯವ್ಯಯದಲ್ಲಿ ಡಿಆರ್‌ಡಿಎ ಆಡಳಿತ ಯೋಜನೆಯಡಿ ರಾಜ್ಯದ ಪಾಲಿನ ಬಾಕಿ ಹಣವನ್ನು ಬೆಂಗಳೂರು ಗ್ರಾಮಾಂತರ ಮತ್ತು ಕೋಲಾರ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**

1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ:ಆರ್–20015:28:2007–ಡಿಆರ್‌ಡಿಎ (ಎಸ್‌ಆರ್ ನಂ.10) ದಿನಾಂಕ: 03.04.08, (ಎಸ್‌ಆರ್‌ನಂ.40) ದಿನಾಂಕ: 28.05.08.
2. ಸರ್ಕಾರದ ಆದೇಶ ಸಂ. ಗ್ರಾಅಪ.7.ಎಸ್‌ಜೆವೈ (ಡಿಆರ್‌ಡಿಎ) 2008 ಬೆಂಗಳೂರು, ದಿನಾಂಕ: 23.05.2008, 26.06.2008.
3. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ:ಆರ್–17014/10/2008–09 ಡಿಆರ್‌ಡಿಎ (ಎಸ್‌ಎಲ್ 82) ದಿನಾಂಕ: 03.11.08 ಮತ್ತು (ಎಸ್ ನಂ.90) ದಿನಾಂಕ 14.11.2008, (ಎಸ್‌ಎಲ್ ನಂ.108) ದಿನಾಂಕ: 11.12.08, (ಎಸ್‌ಎಲ್ ನಂ.141) ದಿನಾಂಕ: 09.01.09 (ಎಸ್‌ಎಲ್ ನಂ.159) ದಿನಾಂಕ: 23.01.09 ಮತ್ತು (ಎಸ್‌ನಂ. 186) ದಿನಾಂಕ: 19.02.09.
4. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 7 ಎಸ್‌ಜೆವೈ (ಡಿಆರ್‌ಡಿಎ) 2008, ಬೆಂಗಳೂರು, ದಿನಾಂಕ: 18.12.2008, 31.01.2009, 19.02.2009 ಮತ್ತು 06.03.2009.
5. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 1 ಎಸ್‌ಜೆವೈ (ಡಿಆರ್‌ಡಿಎ) 2008 (ಪಿ), ಬೆಂಗಳೂರು ದಿನಾಂಕ: 21.03.2009.
6. ಮುಕಾನಿ, ಬೆಂಗಳೂರು ಗ್ರಾ, ಜಿ.ಪಂ. ಇವರ ಪತ್ರ ಸಂಖ್ಯೆ : ಬೆಂಗ್ರಾಜಿಪಂ/ಲೆಕ್ಕ1/ಅನು–ಬಿ/ 2008–09 ದಿನಾಂಕ: 12.03.2009.
7. ಮುಲೆಕಾ, ಕೋಲಾರ, ಜಿಪಂ ಇವರ ಪತ್ರ ಸಂಖ್ಯೆ : ಜಿಪಂಕೋ/ಮುಲೆಅ/ಲೆಶಾ/ಆರ್‌ಡಿಎ/ 08–09 ದಿನಾಂಕ: 11.03.2009

**ಪ್ರಸ್ತಾವನೆ:**

2008–09ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಕೇಂದ್ರ ಸರ್ಕಾರ ಓದಲಾಗಿದೆ (1)ರ ಪತ್ರಗಳ ದಿನಾಂಕ: 03.04.2008 ಹಾಗೂ 28.05.2008 ರಲ್ಲಿ ರಾಜ್ಯದ 29 ಜಿಲ್ಲಾ ಪಂಚಾಯತಿಗಳಿಗೆ ಒಂದನೇ ಕಂತಿನ ಅನುದಾನವಾಗಿ ರೂ.5,38,77,000 ಗಳನ್ನು ಬಿಡುಗಡೆ ಮಾಡಿವೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರ ಓದಲಾಗಿದೆ (2)ರ ಆದೇಶಗಳ ಸಮಸಂಖ್ಯೆ ದಿನಾಂಕ: 23.05.2008 ಮತ್ತು 26.06.2008 ರಲ್ಲಿ ರೂ.1,79,57,000 ಗಳನ್ನು ಬಿಡುಗಡೆ ಮಾಡಿವೆ. ಕೇಂದ್ರ ಸರ್ಕಾರ ಓದಲಾಗಿದೆ (3)ರ ಪತ್ರಗಳಲ್ಲಿ ರಾಜ್ಯದ 24 ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತಿನ ಅನುದಾನವಾಗಿ ರೂ.4,96,41,000 ಗಳನ್ನು ಬಿಡುಗಡೆ ಮಾಡಿದೆ. ರಾಜ್ಯ ಸರ್ಕಾರ ಓದಲಾಗಿದೆ (4)ರ ಆದೇಶಗಳಲ್ಲಿ ರಾಜ್ಯದ ಆಯವ್ಯಯದಲ್ಲಿ ಜಿಲ್ಲೆಗಳಿಗೆ ಲಭ್ಯವಿರುವ ಅನುದಾನದ ಆಧಾರದ ಮೇಲೆ ರೂ.1,64,79,000 ಗಳನ್ನು ಬಿಡುಗಡೆ ಮಾಡಿದೆ. ಇದಲ್ಲದೆ ಓದಲಾಗಿದೆ (5) ರಡಿ ರಾಜ್ಯ ಸರ್ಕಾರವು 11 ಜಿಲ್ಲೆಗಳಿಗೆ ಪುನರ್ವಿನಿಯೋಗ ಮಾಡಿಕೊಂಡು ರೂ.1,10,43,000 ಬಿಡುಗಡೆ ಮಾಡಿದೆ. ಕೇಂದ್ರ ಸರ್ಕಾರವು ಓದಲಾಗಿದೆ (3)ರ ದಿನಾಂಕ: 19.02.2009ರ ಪತ್ರದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ರಾಜ್ಯ ಸರ್ಕಾರ 2007–08ನೇ ಸಾಲಿನ ಎರಡನೇ ಕಂತಿನ ಅನುದಾನ ಕಡಿಮೆ ಬಿಡುಗಡೆ ಮಾಡಿರುವ ಕಾರಣಕ್ಕಾಗಿ ಯಾವುದೇ ಅನುದಾನ ಬಿಡುಗಡೆ ಮಾಡಿರುವುದಿಲ್ಲ. ರಾಜ್ಯ ಸರ್ಕಾರವು ಕಡಿಮೆಯಾಗಿರುವ ಅನುದಾನವನ್ನು 2008–09ನೇ ಸಾಲಿನಲ್ಲಿ ಬಿಡುಗಡೆ ಮಾಡಿದ್ದು, ಜಿಲ್ಲೆಯ ಪರಿಷ್ಕೃತ ಪ್ರಸ್ತಾವನೆಯನ್ನು ಕೇಂದ್ರ ಸರ್ಕಾರಕ್ಕೆ ಸಲ್ಲಿಸಲಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್, ಓದಲಾಗಿದೆ (6)ರಲ್ಲಿ ಕೇಂದ್ರ ಸರ್ಕಾರಕ್ಕೆ ಮಾಹಿತಿ ಸಲ್ಲಿಸಿರುವುದರಿಂದ ಎರಡನೇ ಕಂತಿನ ಅನುದಾನದ ನಿರೀಕ್ಷೆಯಲ್ಲಿದ್ದು, ವೇತನ ಪಾವತಿಸಲು ತೊಂದರೆಯಾಗಿರುವುದರಿಂದ, ರಾಜ್ಯ ಸರ್ಕಾರದ ಅನುದಾನವನ್ನು ಬಿಡುಗಡೆ ಮಾಡಲು ಕೋರಿದೆ. ಕೋಲಾರ ಜಿಲ್ಲಾ ಪಂಚಾಯತಿಗೆ ಈವರೆವಿಗೂ ಕೇಂದ್ರ ಸರ್ಕಾರದಿಂದ ಎರಡನೇ ಕಂತಿನ ಅನುದಾನ ಬಿಡುಗಡೆಯಾಗಿರುವುದಿಲ್ಲ. ಓದಲಾಗಿದೆ (7) ರಲ್ಲಿ ಕೋಲಾರ ಜಿಲ್ಲಾ ಪಂಚಾಯತಿಯು ಅನುದಾನದ ಕೊರತೆಯಿಂದಾಗಿ, ಸಿಬ್ಬಂದಿಗಳ ವೇತನ ಪಾವತಿಸಲು ತೊಂದರೆಯಾಗಿದ್ದು, ಯೋಜನೆಯಡಿ ರಾಜ್ಯದ ಪಾಲಿನ ಅನುದಾನ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಬೆಂಗಳೂರು ಗ್ರಾಮಾಂತರ ಮತ್ತು ಕೋಲಾರ ಜಿಲ್ಲಾ ಪಂಚಾಯತಿಗಳ ಕೋರಿಕೆ ಮೇರೆಗೆ, ಈ ಜಿಲ್ಲಾ ಪಂಚಾಯತಿಗಳಿಗೆ ಕೇಂದ್ರ ಸರ್ಕಾರದ ಎರಡನೇ ಕಂತಿನ ಅನುದಾನದ ಅಂದಾಜು ರೂ.32,90,000 ನಿರೀಕ್ಷಿಸಿ, ನಿರೀಕ್ಷಿಸಿದ ಅನುದಾನದ ಶೇ. 1/3 ಭಾಗ ಅಂದರೆ, ರೂ.10,96,000 ಗಳನ್ನು ಬೆಂಗಳೂರು ಗ್ರಾಮಾಂತರ ಮತ್ತು ಕೋಲಾರ ಜಿಲ್ಲಾ ಪಂಚಾಯತಿಗಳಿಗೆ ವಿಶೇಷ ಪ್ರಕರಣವೆಂದು ಪರಿಗಣಿಸಿ ಅನುದಾನ ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ:

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 1 ಎಸ್‌ಜಿವೈ (ಡಿಆರ್‌ಡಿಎ) 2008 (ಪಿ), ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2009**

2008–09ನೇ ಸಾಲಿನಲ್ಲಿ ರಾಜ್ಯದ ಪಾಲಿನ ಅನುದಾನವನ್ನು ಬೆಂಗಳೂರು ಗ್ರಾಮಾಂತರ ಮತ್ತು ಕೋಲಾರ ಜಿಲ್ಲಾ ಪಂಚಾಯತಿಗಳಿಗೆ ಈ ಕೆಳಕಂಡಂತೆ ಒಟ್ಟು ಅನುದಾನ ರೂ. 10,96,000 ಗಳನ್ನು (ಹತ್ತು ಲಕ್ಷದ ತೊಂಬತ್ತಾರು ಸಾವಿರ ಮಾತ್ರ) ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ. ಸಂ. | ಜಿಲ್ಲಾ ಪಂಚಾಯತ್ ಹೆಸರು | ಜಿ. ಪಂ ಕೋಡ್ | ಡಿ.ಡಿ.ಓ ಕೋಡ್ | ಕೇಂದ್ರ ಸರ್ಕಾರ ಅನುದಾನದ ನಿರೀಕ್ಷೆಯ ಮೇರೆಗೆ ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಎರಡನೇ ಕಂತಿನ ಅನುದಾನ (ರೂ. ಗಳಲ್ಲಿ) |
|---|---|---|---|---|
| 1 | ಬೆಂಗಳೂರು (ಗ್ರಾ) | 402 | 0300ZZ8001 | 5,48,000 |
| 2 | ಕೋಲಾರ | 404 | 0700ZZ8002 | 5,48,000 |
| | | | **ಒಟ್ಟು** | **10,96,000** |

**ಷರತ್ತುಗಳು:**

ಕೇಂದ್ರ ಸರ್ಕಾರ ಎರಡನೇ ಕಂತಾಗಿ ಬಿಡುಗಡೆ ಮಾಡಿದ್ದ ಅನುದಾನದಲ್ಲಿ ಕಡಿತಗೊಳಿಸಿರುವ ಅನುದಾನವನ್ನು ಪ್ರಸಕ್ತ ಸಾಲಿನಲ್ಲಿ ಬಿಡುಗಡೆ ಮಾಡಿದಲ್ಲಿ ಪ್ರಸ್ತುತ ರಾಜ್ಯ ಪಾಲಾಗಿ ಬಿಡುಗಡೆ ಮಾಡುತ್ತಿರುವ ಅನುದಾನವನ್ನೇ ರಾಜ್ಯದ ಪಾಲಾಗಿ ಪರಿಗಣಿಸತಕ್ಕದ್ದು.

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಅನುದಾನವನ್ನು ಜಿಲ್ಲಾ ಪಂಚಾಯತ್ ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಉಪಯೋಗಿಸುವುದು. ಇನ್ನಾವುದೇ ಉದ್ದೇಶಗಳಿಗೆ ಉಪಯೋಗಿಸತಕ್ಕದ್ದಲ್ಲ.

ಅನುದಾನದ ಮಾದರಿಯ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಡುವೆ 75:25ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಲೆಕ್ಕ ಶೀರ್ಷಿಕೆ : "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ (ಕೇಂದ್ರ ಪುರಸ್ಕೃತ ಯೋಜನೆ) 2008–2009 (2515–00–196–6–06)" ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ 1 ಜಡ್‌ಪಿಎ 2007 (ಪಿ2), ದಿನಾಂಕ 26.04.2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ–1ಕ್ಕೆ ಜಮೆ ಮಾಡಿಕೊಂಡು ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

ಬಿಡುಗಡೆ ಮಾಡುವ ಅನುದಾನದ ಆಂತರಿಕ ಲೆಕ್ಕಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಬೆಂಗಳೂರು ಗ್ರಾಮಾಂತರ ಮತ್ತು ಕೋಲಾರ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಅನುದಾನ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಬೆಂಗಳೂರು ಗ್ರಾಮಾಂತರ ಮತ್ತು ಕೋಲಾರ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಆಯಾ ಮಾಹೆಯ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು {ಸ್ವ ಉಕಾ} ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಬೆಂಗಳೂರು ಗ್ರಾಮಾಂತರ ಮತ್ತು ಕೋಲಾರ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನ ವರದಿಗಳನ್ನು, ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 109 ಪಿಬಿಎಸ್ 2009 ದಿನಾಂಕ: 23.03.2009 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಶಮ್ಲಾ ಇಕ್ಬಾಲ್**

ಪಿ.ಆರ್. 1074

ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಸತಿ ಸಚಿವಾಲಯ**

**ವಿಷಯ:** ಆಶ್ರಯ ಯೋಜನೆಗಳಡಿಯಲ್ಲಿ ಮನೆಗಳ ನಿರ್ಮಾಣಕ್ಕೆ ಸಾಲದ ಮೊತ್ತ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂ. ವಇ 13 ಹೆಚ್‌ಎಹೆಚ್ 2008, ದಿನಾಂಕ: 4.11.2008.

**ವಿಷಯ:** 2008–09ನೇ ಸಾಲಿನ ಸವಿವರ ಅಂದಾಜಿನಲ್ಲಿ ಲೆಕ್ಕ ಶೀರ್ಷಿಕೆ 4702 ಅಡಿ ಅನುಮೋದನೆಯಾಗಿರುವ ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರ ವ್ಯಾಪ್ತಿಯಲ್ಲಿ ಬರುವ ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ:10.02.2009ರ ಬಿಜಾಪುರ, ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ–2/2008–09/820.
2. ದಿನಾಂಕ:10.02.2009ರ ಬಿಜಾಪುರ, ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ–12/2008–09/822.
3. ದಿನಾಂಕ:10.02.2009ರ ಬಿಜಾಪುರ, ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ–12/2008–09/823.
4. ದಿನಾಂಕ:25.02.2009ರ ಬಿಜಾಪುರ, ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಎಇ–12/2008–09/1270.
5. ಸರ್ಕಾರದ ಆದೇಶ ಸಂಖ್ಯೆ ಸನೀಇ 1 ಅವಿಸಂ 2009 ದಿನಾಂಕ: 24.02.2009.

**ಪ್ರಸ್ತಾವನೆ:**

2008–09ನೇ ಸಾಲಿನ ಆಯವ್ಯಯದ ವಿವಿಧ ಲೆಕ್ಕ ಶೀರ್ಷಿಕೆಗಳಡಿ 5 ಕಾಮಗಾರಿಗಳ (ಕಾಮಗಾರಿಗಳ ವಿವರಗಳನ್ನು ಅನುಬಂಧದಲ್ಲಿ ತಿಳಿಸಲಾಗಿದೆ) ಅಂದಾಜು ಪಟ್ಟಿಗಳಿಗೆ (ಅಂದಾಜು ಮೊತ್ತ 450.00 ಲಕ್ಷ ರೂ.ಗಳು) ಆಡಳಿತಾತ್ಮಕ ಅನುಮೋದನೆ ನೀಡುವಂತೆ ಮೇಲೆ ಓದಲಾದ ಪತ್ರಗಳಲ್ಲಿ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಪೈಕಿ ಎರಡು ಕಾಮಗಾರಿಗಳಿಗೆ ಆಯವ್ಯಯದಲ್ಲಿ ಒದಗಿಸಿರುವ ಅನುದಾನ ವಾಸ್ತವಿಕ ಅಂದಾಜು ಮೊತ್ತದ ಶೇ.30 ಕ್ಕಿಂತ ಕಡಿಮೆ ಇರುವುದರಿಂದ ಉಲ್ಲೇಖ (5)ರ ಆದೇಶದಲ್ಲಿ ಅನುದಾನದ ಮರುಹೊಂದಾಣಿಕೆ ಮಾಡಿದೆ.

ಆಡಳಿತಾತ್ಮಕ ಅನುಮೋದನೆಗೆ ಕೋರಿರುವ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು 2008–09ನೇ ಸಾಲಿಗೆ ಮುಂದುವರೆಸಿರುವ 2007–08ನೇ ಸಾಲಿನ ಸಣ್ಣ ನೀರಾವರಿ ಬೆಳಗಾವಿ/ಗುಲ್ಬರ್ಗಾ ವೃತ್ತದ ದರಪಟ್ಟಿಯ ದರಗಳನ್ನು ಅಳವಡಿಸಿ ತಯಾರಿಸಲಾಗಿದೆ. ಈ ಕಾಮಗಾರಿಗಳು ಆರ್ಥಿಕವಾಗಿ ಹಾಗೂ ತಾಂತ್ರಿಕವಾಗಿ ಶಕ್ಯವಾಗಿದೆ.

ಪ್ರಸ್ತಾಪಿಸಿರುವ ಕಾಮಗಾರಿಗಳ ಅಂದಾಜು ಮೊತ್ತ, ಆಯವ್ಯಯದ ಲೆಕ್ಕ ಶೀರ್ಷಿಕೆ, ಅನುದಾನ, ಕಾಮಗಾರಿಯ ಸ್ವರೂಪ ಹಾಗೂ ಅಂದಾಜಿನಲ್ಲಿ ಅಳವಡಿಸಿರುವ ಕೆಲಸಗಳ ವಿವರ, ಸೃಷ್ಟಿಯಾಗಲಿರುವ ಹೊಸ ಅಚ್ಚುಕಟ್ಟು ಹಾಗೂ ಲಾಭ ವೆಚ್ಚದ ಅನುಪಾತ ವಿವರಗಳನ್ನು ಅನುಬಂಧದಲ್ಲಿ ಕಾಮಗಾರಿವಾರು ನೀಡಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 15 ಮಸಾವಿ 2009 ಭಾಗ–1 (7), ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2009**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ವ್ಯಾಪ್ತಿಗೆ ಬರುವ ಅಡಕಗೊಳಿಸಿರುವ ಅನುಬಂಧದಲ್ಲಿ ತಿಳಿಸಿರುವ ಒಟ್ಟು ರೂ. 450.00 ಲಕ್ಷ (ನಾಲ್ಕು ನೂರ ಐವತ್ತು ಲಕ್ಷ ರೂ.) ಮೊತ್ತದ 5 ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1) ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
2) ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
3) ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
4) ಕಾಮಗಾರಿಯ ಅಂದಾಜು ಪಟ್ಟಿಗೆ ಸಂಬಂಧಿಸಿದಂತೆ ತಾಂತ್ರಿಕ ಮೌಲ್ಯನಿರ್ಣಯ ಸಮಿತಿ/ ತಾಂತ್ರಿಕ ಸಮಿತಿಯು ಸಭೆಯಲ್ಲಿ ನೀಡಿರುವ ಸೂಚನೆಗಳನ್ನು ಚಾಚೂ ತಪ್ಪದೇ ಪಾಲಿಸತಕ್ಕದ್ದು.
5) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
6) ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್ ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
7) ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.
8) ಇ.ಐ.ಆರ್.ಎಲ್/ ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
9) ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
10) ನೀರ ಅಚ್ಚುಕಟ್ಟು ಹೊಂದಿರುವ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16.05.2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಅನುಬಂಧ

**ಸರ್ಕಾರದ ಆದೇಶ ಸಂಖ್ಯೆ ಸನೀಇ 15 ಮಸಾವಿ 2009 ಭಾಗ–1(7) ದಿನಾಂಕ: 28.02.2009**

(ಮೊತ್ತ ಲಕ್ಷ ರೂ.ಗಳಲ್ಲಿ) ಹಾಗೂ (ವಿಸ್ತೀರ್ಣ ಹೆಕ್ಟೇರ್‌ಗಳಲ್ಲಿ)

| ಕ್ರ. ಸಂ. | ಕಾಮಗಾರಿ ಹೆಸರು | ಸ್ವೀಕೃತ ವಾಗಿರುವ ಅಂದಾಜು ಮೊತ್ತ | ಅನುಬಂಧ–ಇ ವಿವರಗಳು | | ನದಿ ಕೊಳ್ಳ | ಕಾಮಗಾರಿ ಸ್ವರೂಪ | ಹೊಸ ಅಚ್ಚುಕಟ್ಟು | ಪುನರ್ ಸ್ಥಾಪಿಸಲಾಗುವ ಸ್ಥಿರೀಕರಿಸುವ ಅಚ್ಚುಕಟ್ಟು | ಕಾಮಗಾರಿಯ ಸಂಕ್ಷಿಪ್ತ ವಿವರಗಳು |
|---|---|---|---|---|---|---|---|---|---|
| | | | ಅಂದಾಜು ಮೊತ್ತ | ಅನುದಾನ | | | | | |
| 1 | 2 | 3 | 4 | 5 | 6 | 7 | 8 | 9 | 10 |
| | **ಲೆಕ್ಕ ಶೀರ್ಷಿಕೆ 4702–00–101–5–01–139 ಅಣೆಕಟ್ಟು ಮತ್ತು ಪಿಕಪ್ – ಪ್ರಧಾನ ಕಾಮಗಾರಿಗಳು** | | | | | | | | |
| 1 | ಬಳ್ಳಾರಿ ಜಿಲ್ಲೆ ಸಿರಗುಪ್ಪ ತಾಲ್ಲೂಕಿನ ದರೂರು ಹತ್ತಿರ ಚೆಕ್ ಡ್ಯಾಂ ನಿರ್ಮಾಣ. | 50.00 | 30.00 | 9.00 | ಕೃಷ್ಣಾ | ಹೊಸ ಕಾಮಗಾರಿ | 101 | | ಹೊಸ ಚೆಕ್ ಡ್ಯಾಂ ನಿರ್ಮಾಣ ಉದ್ದ – 70.00 ಮೀ. ಎತ್ತರ – 1.80 ಮೀ. ಶೇಖರಣಾ ಸಾಮರ್ಥ್ಯ–1.4538Mcft ಶೇ.10ರ ಬಡ್ಡಿದರದಲ್ಲಿ ಲಾಭ ವೆಚ್ಚದ ಅನುಪಾತ 3.32 |
| | ಆದೇಶ ಸಂಖ್ಯೆ ಸನೀಇ 1 ಆವಿಸಂ 2009 ದಿನಾಂಕ: 24.02.2009 ರಲ್ಲಿ ಅನುಮೋದಿಸಿರುವ ಮರು ಹೊಂದಾಣಿಕೆ ಅನುದಾನ | | | 6.00 | | | | | |
| | **ಒಟ್ಟು** | **50.00** | **30.00** | **15.00** | | | | | |
| 2 | ಉತ್ತರಕನ್ನಡ ಜಿಲ್ಲೆ ಕುಮಟಾ ತಾಲ್ಲೂಕಿನ ಮಣಿಕಟ್ಟಾ ಖಾರ್‌ಲ್ಯಾಂಡ್ ಯೋಜನೆ ಲುಕ್ಕೇರಿ ಸ್ಲೂಯೀಸ್ ಕಂ ಬ್ರಿಡ್ಜ್ ಪುನರ್ನಿರ್ಮಾಣ. | 130.00 | 130.00 | 46.00 | ಪಶ್ಚಿಮ ವಾಹಿನಿ | ಹೊಸ ಕಾಮಗಾರಿ | | 530 | 59.70ಮೀ. ಉದ್ದದ ಸ್ಲೂಯೀಸ್ ಕಂ ಬ್ರಿಡ್ಜ್ ಪುನರ್ನಿರ್ಮಾಣ. |
| | **ಒಟ್ಟು ಲೆಕ್ಕ ಶೀರ್ಷಿಕೆ 4702–00–101–5–01–139** | **180.00** | **160.00** | **61.00** | | | | | |
| | **ಲೆಕ್ಕ ಶೀರ್ಷಿಕೆ 4702–00–101–3–01–139 ಏ.ನೀ.ಯೋಜನೆ ನಿರ್ಮಾಣ (ಪ್ರಧಾನ ಕಾಮಗಾರಿಗಳು)** | | | | | | | | |
| 3 | ಬಳ್ಳಾರಿ ಜಿಲ್ಲೆ ಸಿರಗುಪ್ಪ ತಾಲ್ಲೂಕಿನ ಹಾಗಲೂರು ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ. | 180.00 | 150.00 | 45.00 | ಕೃಷ್ಣಾ | ಹೊಸ ಕಾಮಗಾರಿ | 223 | | ಹೊಸ ಏ.ನೀ.ಯೋ ನಿರ್ಮಾಣ ನೀರಿನ ಮೂಲ – ಹೀರೇಹಳ್ಳ Centrifugal pumps of 70HP-2Nos working & 1 standby ಬಳಸಿ 2300.00ಮೀ. ಉದ್ದದ ಹಾಗೂ 700ಮೀ.ಮೀ. ವ್ಯಾಸದ ಪಿ ಎಸ್ ಸಿ ಏರುಕೊಳವೆ ಮೂಲಕ ನೀರೊದಗಿಸುವುದು. ಶೇ.10ರ ಬಡ್ಡಿದರದಲ್ಲಿ ಲಾಭ ವೆಚ್ಚದ ಅನುಪಾತ 1.59 ಆಗಿರುತ್ತದೆ. |
| | ಆದೇಶ ಸಂಖ್ಯೆ 1 ಆವಿಸಂ 2009 ದಿನಾಂಕ: 24.02.2009 ರಲ್ಲಿ ಅನುಮೋದಿಸಿರುವ ಮರು ಹೊಂದಾಣಿಕೆ ಅನುದಾನ | | | 9.00 | | | | | |
| | **ಒಟ್ಟು** | **180.00** | **150.00** | **54.00** | | | | | |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| | **ಲೆಕ್ಕ ಶೀರ್ಷಿಕೆ 4711–01–103–1–00–140 ಪ್ರವಾಹ ನಿಯಂತ್ರಣ ಕಾಮಗಾರಿಗಳು** | | | | | | | | |
| 4 | ಉತ್ತರ ಕನ್ನಡ ಜಿಲ್ಲೆ ಹಾಗೂ ಅಂಕೋಲ ತಾಲ್ಲೂಕಿನ ಬೊಗ್ಗಿಗದ್ದೆ ಬಳಿ ಹಟ್ಟಿಕೇರಿಯ ಎಡದಂಡೆಗೆ ಪ್ರವಾಹ ಸಂರಕ್ಷಣಾ ಕಾಮಗಾರಿ (ಅನುಮೋದಿತ ಅನುಬಂಧ–ಇ ನಲ್ಲಿ ದುರಸ್ತಿ ಕಾಮಗಾರಿ ಎಂದು ತಿಳಿಸಿದೆ) | 40.00 | 40.00 | 12.00 | ಪಶ್ಚಿಮ ವಾಹಿನಿ | ಹೊಸ ಕಾಮಗಾರಿ | | | ಹತ್ತಿಕೇರಿ ಹಳ್ಳ ನದಿಯ ಎಡದಂಡೆಗೆ ಪ್ರವಾಹ ಸಂರಕ್ಷಣಾ ಕಾಮಗಾರಿ 40 ಹೆಕ್ಟೇರ್ ಕೃಷಿ ಜಮೀನಿನ ಸಂರಕ್ಷಣೆಯಾಗುವುದು. |
| 5 | ಉತ್ತರ ಕನ್ನಡ ಜಿಲ್ಲೆ ಹಾಗೂ ಅಂಕೋಲ ತಾಲ್ಲೂಕಿನ ಹಾರವಾಡ ಹಳ್ಳದ ಎಡದಂಡೆಗೆ ಪ್ರವಾಹ ಸಂರಕ್ಷಣಾ ಕಾಮಗಾರಿ. | 50.00 | 50.00 | 15.00 | ಪಶ್ಚಿಮ ವಾಹಿನಿ | ಹೊಸ ಕಾಮಗಾರಿ | | | ಹಾರವಾಡ ಹಳ್ಳದ ಎಡದಂಡೆಗೆ ಪ್ರವಾಹ ಸಂರಕ್ಷಣಾ ಕಾಮಗಾರಿ 61 ಹೆಕ್ಟೇರ್ ಕೃಷಿ ಜಮೀನಿನ ಸಂರಕ್ಷಣೆಯಾಗುವುದು. |
| | ಲೆಕ್ಕ ಶೀರ್ಷಿಕೆ 4711–01–103–1–00–140 ಒಟ್ಟು | 90.00 | | | | | | | |
| | **ಒಟ್ಟಾರೆ** | **450.00** | **310.00** | **115.00** | | | | | |

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 1091

**ವಿಷಯ:** 2008–09ನೇ ಸಾಲಿನ ಸವಿವರ ಅಂದಾಜಿನಲ್ಲಿ ಲೆಕ್ಕ ಶೀರ್ಷಿಕೆ 4702 ಅಡಿ ಅನುಮೋದನೆಯಾಗಿರುವ ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರ ವ್ಯಾಪ್ತಿಯಲ್ಲಿ ಬರುವ ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ:10.02.2009ರ ಬಿಜಾಪುರ, ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಫಿಬಿ–3/2008–09/802.
2. ದಿನಾಂಕ:19.02.2009ರ ಬಿಜಾಪುರ, ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಎಇ–3/2008–09/1135.
3. ದಿನಾಂಕ:25.02.2009ರ ಬಿಜಾಪುರ, ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಎಇ–12/2008–09/1270.

**ಪ್ರಸ್ತಾವನೆ:**

2008–09ನೇ ಸಾಲಿನ ಆಯವ್ಯಯದ ವಿವಿಧ ಲೆಕ್ಕ ಶೀರ್ಷಿಕೆಗಳಡಿ 4 ಕಾಮಗಾರಿಗಳ (ಕಾಮಗಾರಿಗಳ ವಿವರಗಳನ್ನು ಅನುಬಂಧದಲ್ಲಿ ತಿಳಿಸಲಾಗಿದೆ) ಅಂದಾಜು ಪಟ್ಟಿಗಳಿಗೆ (ಅಂದಾಜು ಮೊತ್ತ 179.00 ಲಕ್ಷ ರೂ.ಗಳು) ಆಡಳಿತಾತ್ಮಕ ಅನುಮೋದನೆ ನೀಡುವಂತೆ ಮೇಲೆ ಓದಲಾದ ಪತ್ರಗಳಲ್ಲಿ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಡಳಿತಾತ್ಮಕ ಅನುಮೋದನೆಗೆ ಕೋರಿರುವ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು 2008–09ನೇ ಸಾಲಿಗೆ ಮುಂದುವರೆಸಿರುವ 2007–08ನೇ ಸಾಲಿನ ಸಣ್ಣ ನೀರಾವರಿ ಬೆಳಗಾವಿ/ಗುಲ್ಬರ್ಗಾ ವೃತ್ತದ ದರಪಟ್ಟಿಯ ದರಗಳನ್ನು ಅಳವಡಿಸಿ ತಯಾರಿಸಲಾಗಿದೆ. ಈ ಕಾಮಗಾರಿಗಳು ಆರ್ಥಿಕವಾಗಿ ಹಾಗೂ ತಾಂತ್ರಿಕವಾಗಿ ಶಕ್ಯವಾಗಿದೆ.

ಪ್ರಸ್ತಾಪಿಸಿರುವ ಕಾಮಗಾರಿಗಳ ಅಂದಾಜು ಮೊತ್ತ, ಆಯವ್ಯಯದ ಲೆಕ್ಕ ಶೀರ್ಷಿಕೆ, ಅನುದಾನ, ಕಾಮಗಾರಿಯ ಸ್ವರೂಪ ಹಾಗೂ ಅಂದಾಜಿನಲ್ಲಿ ಅಳವಡಿಸಿರುವ ಕೆಲಸಗಳ ವಿವರ, ಸೃಷ್ಠಿಯಾಗಲಿರುವ ಹೊಸ ಅಚ್ಚುಕಟ್ಟು ಹಾಗೂ ಲಾಭ ವೆಚ್ಚದ ಅನುಪಾತ ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 15 ಮಸಾವಿ 2009 ಭಾಗ–1 (8), ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2009**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ವ್ಯಾಪ್ತಿಗೆ ಬರುವ ಅಡಕಗೊಳಿಸಿರುವ ಅನುಬಂಧದಲ್ಲಿ ತಿಳಿಸಿರುವ ಒಟ್ಟು ರೂ. 179.00ಲಕ್ಷ (ಒಂದು ನೂರ ಎಪ್ಪತ್ತೊಂಬತ್ತು ಲಕ್ಷ ರೂ.) ಮೊತ್ತದ 4 ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1) ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
2) ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
3) ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
4) ಕಾಮಗಾರಿಯ ಅಂದಾಜು ಪಟ್ಟಿಗೆ ಸಂಬಂಧಿಸಿದಂತೆ ತಾಂತ್ರಿಕ ಮೌಲ್ಯನಿರ್ಣಯ ಸಮಿತಿ/ ತಾಂತ್ರಿಕ ಸಮಿತಿಯು ಸಭೆಯಲ್ಲಿ ನೀಡಿರುವ ಸೂಚನೆಗಳನ್ನು ಚಾಚೂ ತಪ್ಪದೇ ಪಾಲಿಸತಕ್ಕದ್ದು.
5) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
6) ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್ ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
7) ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.
8) ಇ.ಐ.ಆರ್.ಎಲ್/ ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
9) ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
10) ನೇರ ಅಚ್ಚುಕಟ್ಟು ಹೊಂದಿರುವ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16.05.2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**ಅನುಬಂಧ**

**ಸರ್ಕಾರದ ಆದೇಶ ಸಂಖ್ಯೆ ಸನೀಇ 15 ಮಸಾವಿ 2009 ಭಾಗ–1(8) ದಿನಾಂಕ: 28.02.2009**

(ಮೊತ್ತ ಲಕ್ಷ ರೂ.ಗಳಲ್ಲಿ) ಹಾಗೂ (ವಿಸ್ತೀರ್ಣ ಹೆಕ್ಟೇರ್‌ಗಳಲ್ಲಿ)

| ಕ್ರ. ಸಂ. | ಕಾಮಗಾರಿ ಹೆಸರು | ಸ್ವೀಕೃತ ವಾಗಿರುವ ಅಂದಾಜು ಮೊತ್ತ | ಅನುಬಂಧ–ಇ ವಿವರಗಳು | | ನದಿ ಕೊಳ್ಳ | ಕಾಮಗಾರಿ ಸ್ವರೂಪ | ಹೊಸ ಅಚ್ಚುಕಟ್ಟು | ಪುನರ್ ಸ್ಥಾಪಿಸಲಾಗುವ ಸ್ಥಿರೀಕರಿಸುವ ಅಚ್ಚುಕಟ್ಟು | ಕಾಮಗಾರಿಯ ಸಂಕ್ಷಿಪ್ತ ವಿವರಗಳು |
|---|---|---|---|---|---|---|---|---|---|
| | | | ಅಂದಾಜು ಮೊತ್ತ | ಅನುದಾನ | | | | | |
| 1 | 2 | 3 | 4 | 5 | 6 | 7 | 8 | 9 | 10 |
| | **ಲೆಕ್ಕ ಶೀರ್ಷಿಕೆ 4702–00–101–1–02–139 ಹೊಸಕೆರೆಗಳ ನಿರ್ಮಾಣ (ಪ್ರಧಾನ ಕಾಮಗಾರಿಗಳು)** | | | | | | | | |
| 1 | ಗುಲಬರ್ಗಾ ಜಿಲ್ಲೆ ಹಾಗೂ ತಾಲ್ಲೂಕಿನ ಮೇಲಕುಂದಾ ಗ್ರಾಮದ ಸಿಡ್ಲಗುಂಡ ನಾಲೆಗೆ ಜಿನುಗು ಕೆರೆ ನಿರ್ಮಾಣ | 59.00 | 60.00 | 18.00 | ಕೃಷ್ಣಾ | ಹೊಸ ಕಾಮಗಾರಿ | | ಪರೋಕ್ಷ ನೀರಾವರಿ | ಹೊಸ ಜಿನುಗು ಕೆರೆ ನಿರ್ಮಾಣ ಏರಿಯ ಉದ್ದ – 65.00ಮೀ. ಎತ್ತರ–9.00ಮೀ. FOF ಮಾದರಿಯ ಕೋಡಿಯ ಉದ್ದ–5.00ಮೀ, ಶೇಖರಣಾ ಸಾಮರ್ಥ್ಯ–0.03Mcum |
| | **ಲೆಕ್ಕ ಶೀರ್ಷಿಕೆ 4702–00–101–1–07–139 ಕೆರೆಗಳ ಆಧುನೀಕರಣ (ಪ್ರಧಾನ ಕಾಮಗಾರಿಗಳು)** | | | | | | | | |
| 2 | ಹಾವೇರಿ ಜಿಲ್ಲೆ ಕಡಕೋಳ ಕೆರೆಯ ಕೊಚ್ಚಿಹೋಗಿರುವ ಏರಿಯ ಭಾಗದ ಪುರ್ನನಿರ್ಮಾಣ | 40.00 | 40.00 | 12.00 | ಕೃಷ್ಣಾ | ಪುನರುಜ್ಜೀವನ ಕಾಮಗಾರಿ | | 145 | ಭಾರೀ ಮಳೆಯಿಂದಾಗಿ ಕೊಚ್ಚಿಹೋಗಿರುವ ಏರಿಯ ಪುರ್ನನಿರ್ಮಾಣ. |
| 3 | ಹಾವೇರಿ ಜಿಲ್ಲೆ ಹಿರೇಕೆರೂರ ತಾಲ್ಲೂಕಿನ ಹಿರೇಕೆರೂರ ಕೆರೆ ಹೂಳೆತ್ತುವುದು | 40.00 | 40.00 | 12.00 | ಕೃಷ್ಣಾ | ಪುನರುಜ್ಜೀವನ ಕಾಮಗಾರಿ | | 215 | ಕೆರೆಯ ಏರಿ, ವಿತರಣಾ ಕಾಲುವೆ ದುರಸ್ತಿ ಮತ್ತು ಹೊಳೆತ್ತುವುದು. ಹಳೆ ತೂಬುಗಳ ಪುನರ್ ನಿರ್ಮಾಣ ಇತ್ಯಾದಿ. |
| 4 | ಹಾವೇರಿ ಜಿಲ್ಲೆ ಹಿರೇಕೆರೂರ ತಾಲ್ಲೂಕಿನ ಚಿಕ್ಕೇರೂರ ಕೆರೆ ಹೂಳೆತ್ತುವುದು | 40.00 | 40.00 | 12.00 | ಕೃಷ್ಣಾ | ಪುನರುಜ್ಜೀವನ ಕಾಮಗಾರಿ | | 142 | ಕೆರೆಯ ಏರಿ, ವಿತರಣಾ ಕಾಲುವೆ ದುರಸ್ತಿ ಮತ್ತು ಹೊಳೆತ್ತುವುದು. ಹಳೆ ತೂಬುಗಳ ಪುನರ್ ನಿರ್ಮಾಣ ಇತ್ಯಾದಿ. |
| | ಲೆಕ್ಕ ಶೀರ್ಷಿಕೆ 4702–00–101–1–07–139 ಒಟ್ಟು | 120.00 | 120.00 | 36.00 | | | | | |
| | **ಒಟ್ಟು** | **179.00** | **180.00** | **54.00** | | | | | |

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 1092 ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎ.ಜಿ. ಮುಳ್ಳೂರ, ನಿವೃತ್ತ ಸರ್ಕಾರಿ ಅಭಿಯೋಜಕರು, ಬಿಜಾಪುರ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂ: ಲಾ 229 ಪಿಪಿಇ 81, ದಿನಾಂಕ: 24.02.1982.
2. ಸರ್ಕಾರದ ಆದೇಶದ ಸಂ. ಲಾ 25 ಪಿಪಿಇ 83, ದಿನಾಂಕ: 05/06.05.1983.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 03.07.2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/50/2008–09, ದಿನಾಂಕ: 11.07.2008.

**ಪ್ರಸ್ತಾವನೆ:**

ಶ್ರೀ ಎ.ಜಿ. ಮುಳ್ಳೂರ, ನಿವೃತ್ತ ಸರ್ಕಾರಿ ಅಭಿಯೋಜಕರು, ಬಿಜಾಪುರ, ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ: 24.02.1982ರ ಸರ್ಕಾರದ ಅಧಿಸೂಚನೆಯ ಕ್ರ.ಸಂ: 3ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 05.03.1982ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ನಿವೃತ್ತ ಅಧಿಕಾರಿಯವರ ಜನ್ಮ ದಿನಾಂಕ: 01.06.1950 ಆಗಿದ್ದು, ಸದರಿಯವರ ಜನ್ಮ ದಿನಾಂಕವನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ: 05/06.05.1983ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ, ಸದರಿ ನಿವೃತ್ತ ಅಧಿಕಾರಿಯವರು ದಿನಾಂಕ: 05.03.1982 ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿದ್ದು, ಇವರ ಜನ್ಮ ದಿನಾಂಕವನ್ನು 01.06.1950 ಎಂದು ಸರ್ಕಾರವು ಒಪ್ಪಿರುವುದರಿಂದ ಸದರಿ ನಿವೃತ್ತ ಅಧಿಕಾರಿಯವರು 31 ವರ್ಷ 09 ತಿಂಗಳು 04 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದ್ದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ಒಂದು ವರ್ಷದ ಹೆಚ್ಚುವರಿ ಸೇವೆಯನ್ನು ಸದರಿಯವರ ಅರ್ಹತಾದಾಯಕ ಸೇವೆಯಲ್ಲಿ ಸೇರ್ಪಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು, ಶ್ರೀ ಎ.ಜಿ. ಮುಳ್ಳೂರ, ನಿವೃತ್ತ ಸರ್ಕಾರಿ ಅಭಿಯೋಜಕರು, ಬಿಜಾಪುರ, ಇವರು ದಿನಾಂಕ: 05.03.1982ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಹಾಜರಾಗಿರುತ್ತಾರೆ. ಇವರ ಜನ್ಮ ದಿನಾಂಕ: 01.06.1950 ಆಗಿರುತ್ತದೆ. ಸದರಿ ಅಧಿಕಾರಿಯು ಅವರ 31ವರ್ಷ 09ತಿಂಗಳು 04ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಒಂದು ವರ್ಷದ ಸೇವೆಯನ್ನು ಹೆಚ್ಚುವರಿಯಾಗಿ ಸದರಿ ಅಧಿಕಾರಿಯ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಸರ್ಕಾರವು ಆದೇಶವನ್ನು ಹೊರಡಿಸಬಹುದೆಂದು ಶಿಫಾರಸ್ಸನ್ನು ಮಾಡಿರುತ್ತಾರೆ.

ಆದುದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 318 ಪಿಪಿಇ 2008, ಬೆಂಗಳೂರು, ದಿನಾಂಕ : 1ನೇ ಏಪ್ರಿಲ್ 2009.**

ಶ್ರೀ ಎ.ಜಿ. ಮುಳ್ಳೂರ, ನಿವೃತ್ತ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ಒಂದು ವರ್ಷದ ಹೆಚ್ಚುವರಿ ಸೇವಾವಧಿಯನ್ನು ಶ್ರೀಯುತರ ಪಿಂಚಣಿ ಸೌಲಭ್ಯಗಳಿಗೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆ(ವಿಶ್ರಾಂತಿ ವೇತನ)ಯ ಟಿಪ್ಪಣಿ ಸಂ: 3 ಆಇ 28 ವೆಚ್ಚ–11/2008, ದಿನಾಂಕ: 11.12.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 1093

**ವಿಷಯ:** ಶ್ರೀ ಆರ್.ಎಂ. ಗಂಜಿಗಟ್ಟಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಗಂಗಾವತಿ ಇವರ ಜನ್ಮ ದಿನಾಂಕದ ತಿದ್ದುಪಡಿಗಾಗಿ ಮಂಡನಾಧಿಕಾರಿಯನ್ನು ನೇಮಿಸಿ, ಪ್ರಕರಣದ ವಿಚಾರಣೆಗೆ ಆದೇಶಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ: ಒಇ 155 ಪಿಪಿಇ 2008, ದಿನಾಂಕ: 29.07.2008.

2. ಸದರಿ ಅಧಿಕಾರಿಯ ಮನವಿಯ ದಿನಾಂಕ: 18.12.2008.
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂ: ಡಿಪಿಎನ್/ಕೇಂಸ/ವಿವ/61/07–08, ದಿನಾಂಕ:12.01.2009.
4. ಸರ್ಕಾರದ ಅಧಿಸೂಚನೆಯ ಸಂ:ಡಿಪಿಎಆರ್/13/ಎಸ್ಎಸ್ಆರ್/94, ದಿನಾಂಕ: 15.03.1994.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಆರ್.ಎಂ. ಗಂಜಿಗಟ್ಟಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಗಂಗಾವತಿ ಇವರ ಜನ್ಮ ದಿನಾಂಕವನ್ನು ಕರ್ನಾಟಕ ಸರ್ಕಾರಿ ನೌಕರರ (ವಯೋನಿರ್ಧಾರ) (ತಿದ್ದುಪಡಿ) ಕಾಯ್ದೆ 1982ರ ಕಲಂ 3ರ ಉಪಕಲಂ–2ರನ್ವಯ, ಎಸ್ಎಸ್ಎಲ್ಸಿ ಅಂಕಪಟ್ಟಿಯ ನಮೂದಿನಂತೆ 20.08.1962 ಎಂದು ಸರ್ಕಾರವು ಒಪ್ಪಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಮನವಿಯಲ್ಲಿ, ಸದರಿ ಅಧಿಕಾರಿಯು ಅವರ ನಿಜವಾದ ಜನ್ಮ ದಿನಾಂಕವು ಕುಂದುಗೋಳ ತಹಶಿಲ್ದಾರರ ಕಾರ್ಯಾಲಯದಲ್ಲಿನ ನೋಂದಣಿಯನ್ವಯ ನೀಡಿರುವ ಜನನ ಪ್ರಮಾಣ ಪತ್ರದಲ್ಲಿರುವಂತೆ 20.10.1964 ಆಗಿರುತ್ತದೆ. ಎಂದು, ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶಕ್ಕೆ ತಿದ್ದುಪಡಿಯನ್ನು ಕೋರಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರರವರು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯೋ ನಿರ್ಧಾರ) ಅಧಿನಿಯಮ 1974ರ ಕಲಂ 5ರ ಉಪಕಲಂ 1 ಮತ್ತು 2ರ ಹಿನ್ನೆಲೆಯಲ್ಲಿ, ಮೇಲೆ (2)ರಲ್ಲಿ ಓದಲಾದ ಸದರಿ ಅಧಿಕಾರಿಯ ಮನವಿಯನ್ನು ಸರ್ಕಾರಕ್ಕೆ ಕಳುಹಿಸಿದ್ದಾರೆ.

ಮೇಲೆ (4)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯೋ ನಿರ್ಧಾರ) ಅಧಿನಿಯಮ 1974ರ ಕಲಂ 5ರ ಉಪನಿಯಮ 3ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಇಂತಹ ಪ್ರಕರಣಗಳ ಇತ್ಯರ್ಥಕ್ಕಾಗಿ ಕಾನೂನು ಇಲಾಖೆಯ ವಾದೇಕ್ಷಕರು ಹಾಗೂ ಪದನಿಮಿತ್ತ ಸರ್ಕಾರ ಉಪಕಾರ್ಯದರ್ಶಿ ಮಟ್ಟದ ಅಧಿಕಾರಿಯನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಆದ್ದರಿಂದ, ಪ್ರಕರಣದ ವಿಚಾರಣೆಗೆ ಹಾಗೂ ಒಳಾಡಳಿತ ಇಲಾಖೆಯ ಪರವಾಗಿ ವಾದ ಮಂಡಿಸುವ ಸಲುವಾಗಿ ಮಂಡನಾಧಿಕಾರಿಯನ್ನು ನೇಮಕ ಮಾಡಲು, ಈ ಬಗ್ಗೆ ಕಾನೂನು ಇಲಾಖೆಯೊಡನೆ ಸಮಾಲೋಚಿಸಿ ಈ ಮುಂದಿನಂತೆ ಸರ್ಕಾರವು ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 37 ಪಿಪಿಇ 2009, ಬೆಂಗಳೂರು, ದಿನಾಂಕ : 1ನೇ ಏಪ್ರಿಲ್ 2009.**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ, ಶ್ರೀ ಆರ್.ಎಂ. ಗಂಜಿಗಟ್ಟಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಗಂಗಾವತಿ, ಇವರ ಜನ್ಮ ದಿನಾಂಕ:20.08.1962 ಎಂದಿರುವುದನ್ನು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯೋ ನಿರ್ಧಾರ) ಅಧಿನಿಯಮ 1974ರ ನಿಯಮ 5ರ ಉಪನಿಯಮ 1ರನ್ವಯ ತಿದ್ದುಪಡಿ ಮಾಡುವ ಸಲುವಾಗಿ ಸದರಿ ಅಧಿನಿಯಮದ ನಿಯಮ 5ರ ಉಪನಿಯಮ 3ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಕರಣದ ವಿಚಾರಣಾಧಿಕಾರಿಗಳ ಮುಂದೆ ಒಳಾಡಳಿತ ಇಲಾಖೆಯ ಪರವಾಗಿ ಪ್ರಕರಣವನ್ನು ಮಂಡಿಸಲು ಮತ್ತು ವಾದ ಮಾಡಲು ಶ್ರೀ ಎಂ.ಬಿ. ಚಂದ್ರಶೇಖರ್, ಸರ್ಕಾರ ಅಧೀನ ಕಾರ್ಯದರ್ಶಿ (ವ್ಯಾಜ್ಯಗಳು), ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ, ಪ್ರಕರಣದ ವಿಚಾರಣೆಗೆ ಆದೇಶಿಸಿದೆ.

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಅನಧಿಕೃತ ಟಿಪ್ಪಣಿಯ ಸಂಖ್ಯೆ: ಲಾ 01 ಜದಿವಿ 2009, ದಿನಾಂಕ: 07.02.2009ರನ್ವಯ ಮಂಡನಾಧಿಕಾರಿಯನ್ನು ನೇಮಿಸಿ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಪಿ.ಆರ್. 1094

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಬಿ.ಎಂ. ವಿರಕ್ತಮಠ್, ನಿವೃತ್ತ ಅಧಿಕ ಸರ್ಕಾರಿ ಅಭಿಯೋಜಕರು, ಬೆಂಗಳೂರು ನಗರ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಸೌಲಭ್ಯಕ್ಕೆ ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 229 ಪಿಪಿಇ 81, ದಿನಾಂಕ: 24.02.1982.
2. ಸರ್ಕಾರದ ಆದೇಶದ ಸಂ. ಲಾ 102 ಪಿಪಿಇ 83, ದಿನಾಂಕ: 23/25.07.1983.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 30.10.2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/246/2007–08, ದಿನಾಂಕ: 07.01.2008.

**ಪ್ರಸ್ತಾವನೆ:**

ಶ್ರೀ ಬಿ.ಎಂ.ವಿರಕ್ತಮಠ್, ನಿವೃತ್ತ ಅಧಿಕ ಸರ್ಕಾರಿ ಅಭಿಯೋಜಕರು, ಬೆಂಗಳೂರು ನಗರ ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ: 24.02.1982ರ ಸರ್ಕಾರದ ಅಧಿಸೂಚನೆಯ ಕ್ರ.ಸಂ: 28ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 05.03.1982ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 23/25.07.1983ರ ಸರ್ಕಾರ ಆದೇಶದನ್ವಯ ಸದರಿ ನಿವೃತ್ತ ಅಧಿಕಾರಿಯ ಜನ್ಮ ದಿನಾಂಕವನ್ನು 29.04.1950 ಎಂದು ಒಪ್ಪಲಾಗಿದೆ.

ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ, ಸದರಿ ನಿವೃತ್ತ ಅಧಿಕಾರಿಯವರು 31 ವರ್ಷ 10 ತಿಂಗಳು 06 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಅನುಸಾರ ಅರ್ಹ ಹೆಚ್ಚುವರಿ ಸೇವೆಯನು ಅವರ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು, ಶ್ರೀ ಬಿ.ಎಂ. ವಿರಕ್ತಮಠ್, ನಿವೃತ್ತ ಅಧಿಕ ಸರ್ಕಾರಿ ಅಭಿಯೋಜಕರು, ಬೆಂಗಳೂರು ನಗರ ಇವರು ದಿನಾಂಕ: 05.03.1982ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಇವರ ಜನ್ಮ ದಿನಾಂಕ: 29.04.1950 ಆಗಿರುತ್ತದೆ. ಆದ್ದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಮಾತ್ರ ಒಂದು ವರ್ಷದ ಹೆಚ್ಚುವರಿ ಸೇವೆಯನ್ನು ಸದರಿ ಅಧಿಕಾರಿಯ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಆದೇಶವನ್ನು ಹೊರಡಿಸುವಂತೆ ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡಿರುತ್ತಾರೆ.

ಆದುದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 20 ಪಿಪಿಇ 2008, ಬೆಂಗಳೂರು, ದಿನಾಂಕ : 1ನೇ ಏಪ್ರಿಲ್ 2009.**

ಶ್ರೀಯುತ ಬಿ.ಎಂ. ವಿರಕ್ತಮಠ್, ನಿವೃತ್ತ ಅಧಿಕ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ರೀತ್ಯ ಒಂದು ವರ್ಷದ ಅಧಿಕ ಸೇವೆಯನ್ನು ಅವರ ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಆಇ 86 ವೆಚ್ಚ–11/2008, ದಿನಾಂಕ: 23.01.2009ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 1095

## COMMERCE AND INDUSTRIES SECRETARIAT

**Sub:** Appointment of Sri Subir Hari Singh, IAS, as one of the Director on the Board of Directors of KTPO.

**Read:**
1. Notification No. CI DPAR 548 S.A.S. 2008 dated 31.01.2009.
2. Letter No. KTPO/174/401/2008-09 dated 17.03.2009 of Managing Director, KTPO, Bangalore.

**Preamble:**

Sri V. Umesh, IAS the then Principal Secretary to Govt., C & I Department, was appointed as a Director on the Board of KTPO. Since he has been transferred to Health Department as Principal Secretary vide Notification read at (1) above, the present Principal Secretary, C & I Dept. Sri Subir Hari Singh, IAS is to be appointed as a Director of KTPO Board. The Managing Director, KTPO has requested to appoint new Director vide his letter read at (2) above. The matter has been examined by Govt. hence the following order,

**Government Order No. CI 3 SPI 2009, Bangalore, Dated: 2nd April 2009**

Government is pleased to appoint Sri Subir Hari Singh, IAS, Principal Secretary to Govt.,Commerce & Industries Department, as one of the Directors on the Board of Directors of Karnataka

Trade Promotion Organisation [KTPO] in place of Sri V. Umesh, IAS with immediate effect and until further orders.

By Order and in the name of Governor of Karnataka,

P.R. 1096

**APARNA PAVATE**

Desk Officer [Technical Cell] Commerce & Industries Department.

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ವಿಷಯ:** ಶ್ರೀ ಜೆ.ಬಿ. ಕುಮಾರಸ್ವಾಮಿ, ಸಹಾಯಕ ನಿರ್ದೇಶಕರು, ಇವರನ್ನು ಸಹಾಯಕ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಕೊಪ್ಪಳ ಹುದ್ದೆಗೆ ಪುನರ್ ನೇಮಕ ಮಾಡಲು ಹಾಗೂ ದಿ: 07.08.2008 ರಿಂದ 05.10.2008 ರವರೆಗೆ ಸೇವೆ ವಿಮುಕ್ತಿ ಅವಧಿಯನ್ನು dies non ಎಂದು ಪರಿಗಣಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ: ವಾಕೈ 230 ಕೈಸೇವಿ 2001, ದಿ:19.07.2005.
2. ವಿಚಾರಣಾಧಿಕಾರಿಗಳ ವರದಿ ದಿನಾಂಕ: 02.06.2007.
3. ಸರ್ಕಾರದ ಆದೇಶ ಸಂ: ವಾಕೈ 264 ಕೈಸೇವಿ 2005, ದಿ:07.08.2008.
4. ಶ್ರೀ ಜೆ.ಬಿ. ಕುಮಾರಸ್ವಾಮಿ, ಇವರ ಮನವಿ ದಿ: 19.08.2008 ಹಾಗೂ ದಿ: 29.08.2008.
5. ಸರ್ಕಾರದ ಆದೇಶ ಸಂ: ವಾಕೈ 179 ಕೈಸೇವಿ 2008, ದಿ:04.10.2008.
6. ಮಹಾಲೇಖಪಾಲರ ಪತ್ರ ಸಂಖ್ಯೆ: ಜಿಇ 5/ ಎ.ಜಿ.3/ವಿಎಲ್.5/2008–09/887–90 ದಿ: 18.11.2008.
7. ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಪತ್ರ ಸಂಖ್ಯೆ: ಆಡಳಿತ/ಸಿಬ್ಬಂದಿ/ಇ4/ 125/2008–09 ದಿ: 13.03.2009.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಸರ್ಕಾರದ ಆದೇಶದಲ್ಲಿ ಶ್ರೀ ಜೆ.ಬಿ. ಕುಮಾರಸ್ವಾಮಿ, ಸಹಾಯಕ ನಿರ್ದೇಶಕರು, ಇವರ ವಿರುದ್ಧ ಈ ಕೆಳಕಂಡ ನಿರ್ದಿಷ್ಟ ಆಪಾದನೆಗಳನ್ನು ಕುರಿತಂತೆ –

1. ದಿ: 18.03.2000 ರಿಂದ ಅನಧಿಕೃತ ಗೈರುಹಾಜರಿ
2. ಅನಧಿಕೃತ ಗೈರುಹಾಜರಿಯಲ್ಲಿ ಹುದ್ದೆಯ ಪ್ರಭಾರವನ್ನು ಬೇರೆ ಯಾರಿಗೂ ವಹಿಸದೇ ಇರುವುದು.
3. ಕಛೇರಿಯ ವಶದಲ್ಲಿದ್ದ ರೂ. 35,000/– ಗಳನ್ನು ದುರುಪಯೋಗ ಪಡಿಸಿಕೊಂಡಿರುವುದು.

ಇಲಾಖಾ ವಿಚಾರಣೆಯನ್ನು ನಡೆಸಲು ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ (2) ರಲ್ಲಿ ವಿಚಾರಣಾಧಿಕಾರಿಗಳು ಅಧಿಕಾರಿಗಳ ವಿರುದ್ಧದ ಎಲ್ಲಾ ಮೂರು ಆರೋಪಗಳು ರುಜುವಾತಾಗಿದೆಯೆಂದು ಹಾಗೂ ಅಧಿಕಾರಿಯ ಮೇಲಿನ ಮೂರೂ ಆರೋಪಗಳ ಬಗ್ಗೆ ಆರೋಪಿತ ಅಧಿಕಾರಿಯು ದೋಷಿ ಎಂದು ಘೋಷಿಸಿ ಆರೋಪಿತ ಅಧಿಕಾರಿಯಿಂದ ರೂ. 35,000/– ಗಳನ್ನು ಬಡ್ಡಿ ಸಮೇತ ವಸೂಲು ಮಾಡಲು ವಿಚಾರಣಾಧಿಕಾರಿಗಳು ವರದಿ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (3) ರಲ್ಲಿ ಶ್ರೀ ಜೆ.ಬಿ. ಕುಮಾರಸ್ವಾಮಿ, ಹಾಲಿ ಸಹಾಯಕ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಕೊಪ್ಪಳ, (ಹಿಂದಿನ ಸಹಾಯಕ ನಿರ್ದೇಶಕರು, ಜಿಲ್ಲಾ ಪಂಚಾಯತ್, ಕೈಮಗ್ಗ ಮತ್ತು ಜವಳಿ ಇಲಾಖೆ, ಚಿಕ್ಕಮಗಳೂರು) ಇವರು ಅರ್ಹತಾ ಪೂರ್ವ ಸೇವಾವಧಿಯಲ್ಲಿ ಸರ್ಕಾರಿ ನೌಕರರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿ ದುರ್ನಡತೆ/ ಕರ್ತವ್ಯ ಚ್ಯುತಿ ಎಸಗಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರೀಕ ಸೇವೆಗಳು (ಪ್ರೊಬೇಷನ್) ನಿಯಮಗಳು 1977ರ ನಿಯಮ 7 ರ ಅನುಸಾರ ಸರ್ಕಾರಿ ಸೇವೆಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ವಿಮುಕ್ತಿಗೊಳಿಸಲಾಗಿತ್ತು ಹಾಗೂ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟ ರೂ. 35,000/– (ರೂಪಾಯಿ ಮೂವತ್ತೈದು ಸಾವಿರ ಮಾತ್ರ) ಗಳನ್ನು ಭೂಕಂದಾಯ ಬಾಕಿ ಎಂದು ಪರಿಗಣಿಸಿ ವಸೂಲಾತಿ ಮಾಡಲು ಹಾಗೂ ಅಧಿಕಾರಿಯ ವಿರುದ್ಧ ಸಿವಿಲ್ ಮೊಕದ್ದಮೆ ಹೂಡಲು ಆದೇಶಿಸಲಾಗಿತ್ತು.

ಮೇಲೆ ಓದಲಾದ (4) ರಲ್ಲಿ ಶ್ರೀ ಜೆ.ಬಿ. ಕುಮಾರಸ್ವಾಮಿ, ಸಹಾಯಕ ನಿರ್ದೇಶಕರು ಸರ್ಕಾರದ ಆದೇಶ ಸಂ: ವಾಕೈ 264 ಕೈಸೇವಿ 2005, ದಿ:07.08.2008ರ ಆದೇಶವನ್ನು ತಡೆಹಿಡಿದು, ಕೆಲಸದ ಮೇಲೆ ಹಾಜರಾಗಲು ಅನುಮತಿ ನೀಡುವಂತೆ ಹಾಗೂ ವಿಚಾರಣೆಗೆ ಹಾಜರಾಗಲು ಅನುಮತಿ ನೀಡಬೇಕೆಂದು ಸರ್ಕಾರಕ್ಕೆ ವಿನಂತಿಸಿದ್ದಾರೆ.

ಮೇಲೆ ಓದಲಾದ (5) ರಲ್ಲಿ ಶ್ರೀ ಜೆ.ಬಿ. ಕುಮಾರಸ್ವಾಮಿ, ಸಹಾಯಕ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಕೊಪ್ಪಳ, (ಹಿಂದಿನ ಸಹಾಯಕ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು) ಇವರ ವಿರುದ್ಧ ದಿ: 07.08.2008ರಂದು ಹೊರಡಿಸಿದ ಸರ್ಕಾರದ ಆದೇಶ ಸಂ: ವಾಕೈ 264 ಕೈಸೇವಿ 2005ನ್ನು ಮುಂದಿನ

ಆದೇಶದವರೆಗೆ ತಡೆಹಿಡಿಯಲಾಗಿದೆ ಹಾಗೂ ಈ ಪ್ರಕರಣವನ್ನು ಒಂದು ನಿದರ್ಶನ ಎಂದು ಯಾವ ಸಂದರ್ಭದಲ್ಲೂ ಮುಂದಿನ ಪ್ರಕರಣಗಳಲ್ಲಿ ಅನ್ವಯಿಸತಕ್ಕದ್ದಲ್ಲ ಎಂದು ಸಹ ಆದೇಶಿಸಲಾಗಿದೆ.

ಮೇಲೆ ಓದಲಾದ (6) ರಲ್ಲಿ ಮಹಾಲೇಖಪಾಲರು, ಶ್ರೀ ಜೆ.ಬಿ. ಕುಮಾರಸ್ವಾಮಿ, ಸಹಾಯಕ ನಿರ್ದೇಶಕರು, ಇವರನ್ನು ಹಿಂದಿನ ಹುದ್ದೆಗೆ ಪುನರ್ ನೇಮಿಸುವ ಆದೇಶ ಹಾಗೂ ಸೇವೆ ವಿಮುಕ್ತಿ ಹಾಗೂ ಪುನರ್ ನೇಮಕದ ಮಧ್ಯಂತರ ಅವಧಿಯನ್ನು ಯಾವ ರೀತಿ ರೆಗ್ಯುಲೇಟ್ ಮಾಡಬೇಕು ಎಂಬುದರ ಬಗ್ಗೆ ಆದೇಶದ ಪ್ರತಿ ಒದಗಿಸಲು ಕೋರಿರುತ್ತಾರೆ.

ಮೇಲೆ ಓದಲಾದ (7) ರ ಕೈಗಾರಿಕಾ ನಿರ್ದೇಶನಾಲಯದ ಪತ್ರದಲ್ಲಿ ದಿ: 06.10.2008ರಂದು ಪೂರ್ವಾಹ್ನ ಅಧಿಕಾರಿಗಳು ಸಹಾಯಕ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಕೊಪ್ಪಳ, ಹುದ್ದೆಯ ಕಾರ್ಯಭಾರವನ್ನು ಪುನರ್ ವಹಿಸಿಕೊಂಡಿರುತ್ತಾರೆಂದು ವರದಿಸಲಾಗಿದೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 179 ಕೈಸೇವಿ 2008, ಬೆಂಗಳೂರು, ದಿನಾಂಕ: 3ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಜೆ.ಬಿ. ಕುಮಾರಸ್ವಾಮಿ, ಸಹಾಯಕ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಕೊಪ್ಪಳ, (ಹಿಂದಿನ ಸಹಾಯಕ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು) ಇವರ ವಿರುದ್ಧ ದಿ: 07.08.2008ರಂದು ಹೊರಡಿಸಿದ ಸರ್ಕಾರದ ಆದೇಶ ಸಂ: ವಾಕೈ 264 ಕೈಸೇವಿ 2005ನ್ನು ಉಲ್ಲೇಖಿತ (5)ರ ಆದೇಶದಲ್ಲಿ ಮುಂದಿನ ಆದೇಶದವರೆಗೆ ತಡೆಹಿಡಿಯಲಾಗಿರುವುದರಿಂದ ಶ್ರೀ ಜೆ.ಬಿ. ಕುಮಾರಸ್ವಾಮಿ, ಇವರನ್ನು ಸಹಾಯಕ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಕೊಪ್ಪಳ, ಹುದ್ದೆಗೆ ಪುನರ್ ನೇಮಕ ಮಾಡಿ ಆದೇಶಿಸಿದೆ ಹಾಗೂ ದಿ: 07.08.2008 ರಿಂದ 05.10.2008ರವರೆಗಿನ ಅವಧಿಯಲ್ಲಿ ಸದರಿ ಅಧಿಕಾರಿಯು ಕಾರ್ಯ ನಿರ್ವಹಿಸದೇ ಇರುವುದರಿಂದ, ಈ ಸೇವೆ ವಿಮುಕ್ತಿ ಹಾಗೂ ಪುನರ್ ನೇಮಕದ ಮಧ್ಯಂತರ ಅವಧಿಯನ್ನು ಲೆಕ್ಕಕ್ಕಿಲ್ಲದ ಅವಧಿ (dies non) ಎಂದು ಪರಿಗಣಿಸಿ ಆದೇಶ ಹೊರಡಿಸಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಟಿಪ್ಪಣಿ ಸಂಖ್ಯೆ: ಸಿಆಸುಇ 523 ಸೇನಿಎ 2008 ದಿ: 09.01.2009ರ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1097

**ಬಿ.ಸಿ. ಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು)

**ವಿಷಯ:** ಶ್ರೀ ಟಿ.ಎಸ್. ಮಲ್ಲಿಕಾರ್ಜುನ, ಸಹಾಯಕ ನಿರ್ದೇಶಕರು, (ಅಮಾನತ್ತು) ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಪುರ, ಧಾರವಾಡ ರವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ:**

1. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರದ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಎಲ್.22/ಸಿಆರ್–3/2008/ಡಿಹೆಚ್‌ಆರ್ ದಿನಾಂಕ: 20.01.2009.
2. ತನಿಖಾಧಿಕಾರಿಯ ವರದಿ ನಂ. ಪಿಐ/ಕೆಎಲ್‌ಎ/ಧಾ/ಸಿಆರ್ ನಂ. 3/08/ಅವಿ/08 ದಿ:12.09.08.
3. ತನಿಖಾ ದಾಖಲೆಗಳ ನಕಲುಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ ಪ್ರಾಯೋಗಿಕ ಪಂಚನಾಮೆ, ಟ್ರ್ಯಾಪ್ ಪಂಚನಾಮೆ, ಜಪ್ತ ಪಂಚನಾಮ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ:**

ಶ್ರೀ ಟಿ.ಎಸ್. ಮಲ್ಲಿಕಾರ್ಜುನ, ಸಹಾಯಕ ನಿರ್ದೇಶಕರು, (ಅಮಾನತ್ತು) ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಪುರ, ಧಾರವಾಡ ಇವರ ವಿರುದ್ಧ ಗುನ್ನೆ ನಂ. 3/2008ರಲ್ಲಿ ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಧಾರವಾಡ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು ಉಲ್ಲೇಖಿತ (2) ಮತ್ತು (3) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ತಮ್ಮ ಪತ್ರ ಸಂಖ್ಯೆ: ಸಂಖ್ಯೆ:ಲೋಕ್/ಐಎನ್‌ವಿ(ಜಿ)/ ಎಲ್.22/ ಸಿಆರ್–3/ 2008/ ಡಿಹೆಚ್‌ಆರ್ ದಿನಾಂಕ: 20.01.2009 (ಉಲ್ಲೇಖ–1) ರೊಡನೆ ಕಳುಹಿಸುತ್ತಾ, ಆಪಾದಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧ ಕಾಯ್ದೆ 1988ರ 19ನೇ ಕಲಂ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ತಮ್ಮ ಉಲ್ಲೇಖಿತ ಪತ್ರ ಸಂಖ್ಯೆ: ಸಂಖ್ಯೆ:ಲೋಕ್/ ಐಎನ್‌ವಿ (ಜಿ)/ ಎಲ್.22/ ಸಿಆರ್–3/ 2008/ ಡಿಹೆಚ್‌ಆರ್ ದಿನಾಂಕ:20.01.2009ರೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1. ಶ್ರೀ ಕೃಷ್ಣ ಪ್ರಭಾಕರ ಕುಲಕರ್ಣಿ, ಉದ್ಯಮಿದಾರ, ಮೆ: ಕೆ.ಪಿ. ಇಂಡಸ್ಟ್ರೀಸ್, ಬೇಲೂರ ಕೈಗಾರಿಕಾ ಪ್ರದೇಶ, ಧಾರವಾಡ ಇವರ ಫಿರ್ಯಾದಿ ದಿ: 04.03.2008.
2. ಪ್ರಥಮ ವರ್ತಮಾನ ವರದಿ, ಮಾನ್ಯ ಜಿಲ್ಲಾ ಸತ್ರ ಹಾಗೂ ವಿಶೇಷ ನಾಯಾಧೀಶರು, ಧಾರವಾಡ ಲೋಕಾಯುಕ್ತ ಪೊಲೀಸ್ ಠಾಣೆ, ಧಾರವಾಡ ಗುನ್ನೆ ನಂ. 3/2008 ಕಲಂ 7, 13 (1) ಲ ಸಹ ಕಲಂ 13(2) ಪಿಸಿ ಆ್ಯಕ್ಟ್– 1988
3. ದಿ: 04.03.2008ರಂದು ಮಾಡಿದ ಪ್ರಾಯೋಗಿಕ ಪಂಚನಾಮಾ
4. ದಿ: 04.03.2008ರಂದು ಮಾಡಿದ ಟ್ರ್ಯಾಪ್ ಪಂಚನಾಮಾ
5. ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: ಎಲ್‌ವಾಯ್‌ಕೆ/ಎಸಿಇ/ಧಾ/3/08/2008 ದಿ: 02.06.2008
6. ತನಿಖಾಧಿಕಾರಿಗಳು ಪಂಚರ ಸಮಕ್ಷಮ ತೆಗೆದ ಗುನ್ನೆ ಜಾಗೆಯ ಕಚ್ಚಾ ನಕಾಶೆ.
7. ಸಾಕ್ಷಿಗಳ ಹೇಳಿಕೆಗಳು (ಪಟ್ಟಿಯನ್ನು ಅಂತಿಮ ವರದಿಯಲ್ಲಿ ಸೇರಿಸಲಾಗಿದೆ)
8. ದಿ: 04.03.2008ರಂದು ಆಪಾದಿತ ಅಧಿಕಾರಿ ನೀಡಿದ ಸಮಜಾಯಿಷಿ ಹೇಳಿಕೆ.

ತನಿಖಾಧಿಕಾರಿಗಳಾದ ಶ್ರೀ ಅಲ್ಲಮಪ್ರಭು ಸುಬೇಧರ, ಪಿಐ, ಲೋಕಾಯುಕ್ತ, ಪೊಲೀಸ್ ಠಾಣೆ, ಧಾರವಾಡರವರು ಶ್ರೀ ಟಿ.ಎಸ್. ಮಲ್ಲಿಕಾರ್ಜುನ, ಸಹಾಯಕ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಪುರ, ಧಾರವಾಡ, ರವರ ವಿರುದ್ಧ ಧಾರವಾಡ ಕರ್ನಾಟಕ ಲೋಕಾಯುಕ್ತ ಆರಕ್ಷಕ ಠಾಣೆ ಗುನ್ನೆ ನಂ. 3/2008ರಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ – 1988ರ ಕಲಂ 7, 13, (1) (ಡಿ) ಸಹ ಕಲಂ 13 (2) ಪಿಸಿ ಆ್ಯಕ್ಟ್ 1988ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆರೋಪಿತ ಸರ್ಕಾರಿ ಅಧಿಕಾರಿಯಾದ ಶ್ರೀ ಟಿ.ಎಸ್. ಮಲ್ಲಿಕಾರ್ಜುನ, ಸಹಾಯಕ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಪುರ, ಧಾರವಾಡ, ರವರು ಪ್ರಕರಣದ ಫಿರ್ಯಾದಿಯಾದ ಶ್ರೀ ಕೃಷ್ಣ ಪಿ. ಕುಲಕರ್ಣಿ, ಇವರಿಗೆ ಸರ್ಕಾರದಿಂದ ಮಂಜೂರಾದ ಸಬ್ಸಿಡಿ ಹಣ ಬಿಡುಗಡೆ ಮಾಡುವ ಕುರಿತು ಹಾಗೂ ಉಳಿದ ಸಬ್ಸಿಡಿಯನ್ನು ಮಂಜೂರಿಸುವ ಕುರಿತು ರೂ. 2,000/– ಗಳ ಲಂಚವನ್ನು ಕೇಳಿದ್ದು ಇರುತ್ತದೆ ಮತ್ತು ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸರ್ಕಾರಿ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿರುತ್ತಾರೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯ ಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿ: 04.03.2008ರಂದು ಸಹಾಯಕ ನಿರ್ದೇಶಕರ ಕಛೇರಿ, ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಪುರ, ಧಾರವಾಡದಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿದ್ದು, ಶ್ರೀ ಟಿ.ಎಸ್. ಮಲ್ಲಿಕಾರ್ಜುನ, ಸಹಾಯಕ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಪುರ, ಧಾರವಾಡ, ರವರು ಅಕ್ರಮ ಸಂಭಾವನೆಯಾದ ರೂ. 2,000/– ಗಳನ್ನು ಸಬ್ಸಿಡಿ ಹಣ ಮಂಜೂರಿಸಲು ಲಂಚದ ಹಣ ಕೇಳಿ ಪಡೆಯುತ್ತಿದ್ದಾಗ ಸಿಕ್ಕಿ ಹಾಕಿಕೊಂಡಿರುತ್ತಾರೆ. ಆಪಾದಿತ ಸರ್ಕಾರಿ ಅಧಿಕಾರಿಯ ಬಲಗೈ ಮತ್ತು ಎಡಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ಹಾಕಿ ಡಿಸ್ಟಲ್ ವಾಟರಿನ ದ್ರಾವಣದಲ್ಲಿ ಮೊರ್ಜನೆ ಮಾಡಿ ಫಿನಾಫ್ತಲೀನ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ.

ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸರ್ಕಾರಿ ನೌಕರರ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ. 2,000/– (ಎರಡು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಶ್ರೀ ಟಿ.ಎಸ್. ಮಲ್ಲಿಕಾರ್ಜುನ, ಸಹಾಯಕ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಪುರ, ಧಾರವಾಡ, ಇವರಿಂದ ಆಪಾದಿತ ಅಧಿಕಾರಿಯ ಕಛೇರಿಯಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ 1988ರ ಕಲಂ 7, 13 (1) (ಡಿ) ಸಹ ಕಲಂ 13 (2) ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುವುದರಿಂದ, ಇವರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 19 (1) (ಸಿ) ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರ ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತರನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳದ್ದಾಗಿದೆ. ಆದ್ದರಿಂದ ಲಂಚ ನಿರೋಧ ಕಾಯ್ದೆ 1988ರ 19 (1) (ಸಿ) ರ ಅಡಿ ಆಪಾದಿತ ಅಧಿಕಾರಿಯಾಗಿದ್ದ ಶ್ರೀ ಟಿ.ಎಸ್. ಮಲ್ಲಿಕಾರ್ಜುನ,

ಸಹಾಯಕ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಪುರ, ಧಾರವಾಡ, (ಅಮಾನತ್ತು) ಇವರನ್ನು ಅಭಿಯೋಜನೆಗೆ ಒಳಪಡಿಸಲು ಸರ್ಕಾರವು ಈ ಕೆಳಕಂಡಂತೆ ಮಂಜೂರಾತಿ ಆದೇಶ ನೀಡಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 85 ಕೈಸೇವಿ 2008, (ಭಾಗ), ಬೆಂಗಳೂರು, ದಿನಾಂಕ: 3ನೇ ಏಪ್ರಿಲ್ 2009**

ಶ್ರೀ ಟಿ.ಎಸ್.ಮಲ್ಲಿಕಾರ್ಜುನ, ಸಹಾಯಕ ನಿರ್ದೇಶಕರು, (ಅಮಾನತ್ತು) ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಪುರ, ಧಾರವಾಡ, ಇವರನ್ನು ಹುದ್ದೆಯಿಂದ ತೆಗೆದು ಹಾಕುವ (ವಜಾ ಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಟಿ.ಎಸ್. ಮಲ್ಲಿಕಾರ್ಜುನ, ಸಹಾಯಕ ನಿರ್ದೇಶಕರು, (ಅಮಾನತ್ತು) ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಪುರ, ಧಾರವಾಡ, ಇವರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 7, 13 (1) (ಡಿ) ಜೊತೆಯಲ್ಲಿ ಓದಲಾದ ಕಲಂ 13(2) ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಸದರಿ ಕಾಯ್ದೆಯ ಕಲಂ 19 (1) (ಸಿ) ರ ಅಡಿ ಅಭಿಯೋಗಗೊಳಿಸಲು ಮಂಜೂರಾತಿಯನ್ನು ನೀಡಿದೆ.

ಈ ಮೇಲ್ಕಂಡ ಆದೇಶವನ್ನು ಈ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿ: 03.04.2009 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1098

**ಬಿ.ಸಿ. ಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು)

**ಆರ್ಥಿಕ ಸಚಿವಾಲಯ**

**ವಿಷಯ:** ಮುಖ್ಯ ಮಂತ್ರಿಯವರ ಆರ್ಥಿಕ ಸಲಹೆಗಾರರು ಇವರು ತೆಗೆದುಕೊಳ್ಳುವ ಸಭೆಗಳಲ್ಲಿ ನೀಡುವ ಟೀ, ಕಾಫೀ ಮತ್ತು ಅಲ್ಪೋಪಹಾರದ ಸಲುವಾಗಿ ಮಾಡುವ ವೆಚ್ಚ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಆಇ 1 ಟಿಸಿಇ 2000, ದಿನಾಂಕ: 3.1.2001.
2. ಅಧಿಸೂಚನೆ ಸಂಖ್ಯೆ:ಸಿಆಸುಇ 492 ಸಅಸೇ 2008 ದಿನಾಂಕ: 10.06.2008.
3. ಡಾ: ಕೆ.ವಿ. ರಾಜು, ಮುಖ್ಯ ಮಂತ್ರಿಯವರ ಆರ್ಥಿಕ ಸಲಹೆಗಾರರು ಇವರ ಟಿಪ್ಪಣಿ ಸಂಖ್ಯೆ. ಇಎಸಿಎಂ/15/2009 ದಿನಾಂಕ: 19.02.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದ ಕ್ರಮ ಸಂಖ್ಯೆ 4 ರಲ್ಲಿ ವಿವರಿಸಿರುವ ಪ್ರಧಾನ ಕಾರ್ಯದರ್ಶಿಗಳು, ಕಾರ್ಯದರ್ಶಿಗಳು–2, ವಿಶೇಷ ಕಾರ್ಯದರ್ಶಿಗಳು, ವಿಭಾಗಾಧಿಕಾರಿಗಳು, ವಾಣಿಜ್ಯ ತೆರಿಗೆ ಆಯುಕ್ತರು, ಅಬಕಾರಿ ಆಯುಕ್ತರು, ಮುಂತಾದ ಇಲಾಖಾ ಕಾರ್ಯದರ್ಶಿಗಳ ಮಟ್ಟದ ಅಧಿಕಾರಿಗಳು ನಡೆಸುವ ಅಧಿಕೃತ ಸಭೆಗಳಲ್ಲಿ ನೀಡುವ ಟೀ, ಕಾಫೀ, ಅಲ್ಪೋಪಹಾರದ ಉದ್ದೇಶ ಮಾಡುವ ವೆಚ್ಚದ ಆರ್ಥಿಕ ಮಿತಿಯನ್ನು 6000/– ರೂ.ಗಳಿಗೆ ನಿಗದಿಪಡಿಸಲಾಗಿದೆ.

ಡಾ: ಕೆ.ವಿ. ರಾಜು ರವರನ್ನು ಮುಖ್ಯ ಮಂತ್ರಿಯವರ ಆರ್ಥಿಕ ಸಲಹೆಗಾರರನ್ನಾಗಿ ಉಲ್ಲೇಖ (2)ರ ಅಧಿಸೂಚನೆಯಲ್ಲಿ ನೇಮಿಸಲಾಗಿತ್ತು, ಇವರು ತೆಗೆದುಕೊಳ್ಳುವ ಸಭೆಗಳಲ್ಲಿ ನೀಡುವ ಟೀ, ಕಾಫೀ ಮತ್ತು ಅಲ್ಪೋಪಹಾರದ ಸಲುವಾಗಿ ಪ್ರತಿ ವರ್ಷಕ್ಕೆ ರೂ. 6000/– ಗಳನ್ನು ವೆಚ್ಚ ಮಾಡಲು ಅವಕಾಶ ಕಲ್ಪಿಸಿ ಆದೇಶ ಹೊರಡಿಸಬೇಕೆಂದು ಮೇಲೆ (3) ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 2 ಟಿಸಿಇ 2009, ಬೆಂಗಳೂರು, ದಿನಾಂಕ: 1ನೇ ಏಪ್ರಿಲ್ 2009**

ಸರ್ಕಾರದ ಆದೇಶ ಸಂಖ್ಯೆ ; ಎಫ್‌ಡಿ 1 ಟಿಸಿಇ 2000 ದಿನಾಂಕ: 3.1.2001 ರ ಕ್ರಮ ಸಂಖ್ಯೆ (4) ರಲ್ಲಿ ವಿವರಿಸಿರುವ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳು ಮುಂತಾದವರ ಪಟ್ಟಿಯಲ್ಲಿ ಮಾನ್ಯ ಮುಖ್ಯ ಮಂತ್ರಿಯವರ ಆರ್ಥಿಕ ಸಲಹೆಗಾರರು ಇವರ ಹೆಸರನ್ನು ಸೇರಿಸಲು ಆದೇಶಿಸಲಾಗಿದೆ. ಇವರು ನಡೆಸುವ ಅಧಿಕೃತ ಸಭೆಗಳಲ್ಲಿ ನೀಡುವ ಟೀ, ಕಾಫೀ ಮತ್ತು ಅಲ್ಪೋಪಹಾರದ ಸಲುವಾಗಿ ಮಾಡುವ ವಾರ್ಷಿಕ ವೆಚ್ಚ 6000/– ರೂ ಗಳಿಗೆ ಮಿತಿಗೊಳಿಸಿ ನಿಗದಿಪಡಿಸಲಾಗಿದೆ.

ಈ ಬಗ್ಗೆ ಸಾದಿಲ್ವಾರು ವೆಚ್ಚ ಕೈಪಿಡಿ ನಿಯಮಗಳಿಗೆ ಸೂಕ್ತ ತಿದ್ದುಪಡಿ ಮಾಡಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಶಾಮರಾವ್**

ಪಿ.ಆರ್. 1099

ಸರ್ಕಾರದ ಅಧೀನ ಕಾರ್ಯದರ್ಶಿ, (ಆರ್ಥಿಕ ನಿಯಮಗಳು, ಆಯವ್ಯಯ ಸಂಕಲನ ಮತ್ತು ಸಮಿತಿ ಶಾಖೆ) ಆರ್ಥಿಕ ಇಲಾಖೆ.

**ನಗರಾಭಿವೃದ್ಧಿ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ:ನಅಇ 05 ಬೆಂಪ್ರಾ 2008, ಬೆಂಗಳೂರು, ದಿನಾಂಕ: 6ನೇ ಏಪ್ರಿಲ್ 2009**

ಸರ್ಕಾರಿ ಅಧಿಸೂಚನೆ ಸಂಖ್ಯೆ:ನಅಇ 05 ಬೆಂರೂಪ್ರಾ 2008 ದಿನಾಂಕ: 12.11.2008ರಲ್ಲಿನ ಕ್ರಮ ಸಂಖ್ಯೆ:13ರಲ್ಲಿ ನಗರ ಯೋಜನಾ ಜಂಟಿ ನಿರ್ದೇಶಕರು, ನಗರ ಯೋಜನಾ ನಿರ್ದೇಶಕರ ಕಛೇರಿ ಬೆಂಗಳೂರು ಸದಸ್ಯರು" ಎಂದು ನಮೂದಿಸಿರುವುದಕ್ಕೆ ಬದಲಾಗಿ "ನಗರ ಯೋಜನಾ ಹೆಚ್ಚುವರಿ ನಿರ್ದೇಶಕರು ಬಿ.ಎಂ.ಐ.ಸಿ.ಎ.ಸಿ.ಎ. ಬೆಂಗಳೂರು ಸದಸ್ಯ ಕಾರ್ಯದರ್ಶಿ ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1131

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**EDUCATION SECRETARIAT**

**NOTIFICATION**

**No. ED 73 TEC 2008, Bangalore, Dated: 2nd June 2008**

Whereas it is considered necessary to make certain modifications in the Karnataka Selection of candidates for admission to Master of Business Administration and Master of Computer Application Courses Rules, 2004. Therefore, in exercise of the powers conferred by sub section (1) of section 14 of the Karnataka Educational Institutions (Prohibition of Capitation Fee) Act 1984 (Karnataka Act 37 of 1984) the Government of Karnataka hereby the makes following rules namely:-

**1. Title, Commencement and Application:-** (1) These rules may be called the Karnataka Selection of candidates for admission to master of Business Administration and Master of Computer Application Courses Amendment Rules, 2008.

(2) They shall come into force on the date of their publication in the official gazette

(3) The following amendments may be incorporated in the existing rules

"3. Academic Eligibility:

(1) Admission to Master of Business Administration and Master of Computer Application course shall be open for the candidates who have passed the Bachelor Degree with not less than fifty percent i.e. integer 50% (rounding aggregate percent is not permitted) of the marks in the aggregate of all the years of the degree examinations. However, in the case of candidates belonging to Scheduled Castes, Scheduled Tribes and Category-I, the aggregate percent of Marks of all the years of the qualifying examination shall not be less than forty five percent i.e integer 45% (rounding aggregate percent is not permitted)

Provided that for Master of Computer Application course he shall have passed Bachelor Degree with not less than fifty percent of marks i.e integer 50% (rounding aggregate percent is not permitted) with Mathematics or Statistics or Computer Science or Computer Applications or Business Mathematics or Business Statistics as one of optional or elective. However, in case of candidates belonging to Scheduled Castes, Schedules Tribes and Category-I, the percentage of marks shall not be less than forty five percent i.e integer 45% (rounding aggregate percent is not permitted)

By Order and in the name of Governor of Karnataka,

**N.R. PRABHU**

P.R. 1132

Under Secretary to Government,

Education Department, (Collegiate & Technical Education)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಕೆ.ವಿ. ನಂಜಪ್ಪ, ಸಿ.ಎಚ್.ಸಿ.–176, ಕುದೇರು ಪೊಲೀಸ್ ಠಾಣೆ, ಚಾಮರಾಜನಗರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಾಮರಾಜನಗರ ಜಿಲ್ಲೆ, ಇವರ ಆದೇಶ ಸಂಖ್ಯೆ:ಚಾನ:ಡಿಇ:38/98–99 ದಿನಾಂಕ:13.09.01.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ:ಅಪೀಲು/18/2008–09 ದಿ:25.06.2008.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:18.08.08.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)69/2008–09 ದಿ:16.01.2009.

**ಪ್ರಸ್ತಾವನೆ:**

ಶ್ರೀ ಕೆ.ವಿ. ನಂಜಪ್ಪ, ಸಿ.ಎಚ್.ಸಿ.–176, ಕುದೇರು ಪೊಲೀಸ್ ಠಾಣೆ, ಚಾಮರಾಜನಗರ ಜಿಲ್ಲೆ, ಇವರು ಸರಗೂರು ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

"ಸರಗೂರು ಪೊಲೀಸ್ ಠಾಣೆಯಲ್ಲಿ ಪೇದೆಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಎಚ್.ಡಿ. ಕೋಟೆ ತಾಲ್ಲೂಕು, ಬಿಡಗಲು ಗ್ರಾಮದ ಕುಮಾರಿ ನಿರ್ಮಲ ಎಂಬಾಕೆಯೊಂದಿಗೆ ಪ್ರೇಮ ವ್ಯವಹಾರವನ್ನಿಟ್ಟುಕೊಂಡಿದ್ದು, ಮದುವೆಯಾಗುವುದಿಲ್ಲವೆಂದು ತಿಳಿಸಿದ ಮೇರೆಗೆ ಕು:ನಿರ್ಮಲ ವಿಷ ಸೇವಿಸಿ ಠಾಣೆಯ ಮುಂದೆಯೇ ಆತ್ಮಹತ್ಯೆ ಮಾಡಿಕೊಂಡಿದ್ದು ಒಂದು ಪ್ರಾಣಹಾನಿಯಾಗುವಂತೆ ದುರ್ನಡತೆ ಪ್ರದರ್ಶಿಸಿದ್ದೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿಲ್ಲ ಎಂದು ಸಲ್ಲಿಸಿದ ವರದಿ ಶಿಸ್ತು ಪ್ರಾಧಿಕಾರವು ಒಪ್ಪದೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಚಾಮರಾಜನಗರ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:13.09.01ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮೂರು ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗುವಂತೆ ಮುಂದೂಡಿ, ಅಮಾನತ್ತಿನಲ್ಲಿಡಲಾದ ದಿನಾಂಕ:29.01.97 ರಿಂದ ದಿ:03.11.98 ರವರೆಗಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ, ಆದೇಶಿಸಿದ್ದಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 25.06.2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 311 ಪೊಸಿಅ 2008, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ವಿ.ನಂಜಪ್ಪ, ಸಿ.ಎಚ್.ಸಿ.–176, ಕುದೇರು ಪೊಲೀಸ್ ಠಾಣೆ, ಚಾಮರಾಜನಗರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1133

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಎಸ್.ಪಿ.ಮಣಕವಾಡ, ಆರ್.ಪಿ.ಐ., ಡಿ.ಎ.ಆರ್., ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ:ಅಪೀಲು/35/2006–07 ದಿ:17.07.2007.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(8)70/2007–08 ದಿ:11.02.2008.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:19.06.2008.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)70/2007–08 ದಿನಾಂಕ:07.01.2009.

**ಪ್ರಸ್ತಾವನೆ:**

ಶ್ರೀ ಎಸ್.ಪಿ. ಮಣಕವಾಡ, ಆರ್.ಪಿ.ಐ., ಡಿ.ಎ.ಆರ್., ಮಂಡ್ಯ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ನಿರ್ಲಕ್ಷತೆ, ಬೇಜವಾಬ್ದಾರಿತನ ಪ್ರದರ್ಶಿಸಿದ್ದಾರೆಂದು ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆ ಹೊರಿಸಲಾಗಿದೆ.

**ದೋಷರೋಪಣೆ:**

"ನೀವು ಜಿಲ್ಲಾ ಮೀಸಲು ಪಡೆಯಲ್ಲಿ ಆರ್.ಪಿ.ಐ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದು ಕರ್ನಾಟಕ ಪೊಲೀಸ್ ಮ್ಯಾನುಯಲ್ ಭಾಗ–2ರ ಆದೇಶ ಸಂಖ್ಯೆ:2010ರ ಪ್ರಕಾರ ಮೀಸಲು ಪಡೆಯ ವಾಹನಗಳ ನಿರ್ವಹಣೆ ಹಾಗೂ ಶುಚಿತ್ವದ ಬಗ್ಗೆ ಕ್ರಮ ಕೈಗೊಳ್ಳದೆ ಕರ್ತವ್ಯದಲ್ಲಿ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಲೋಪವೆಸಗಿರುವ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 17.07.2007ರ ಆದೇಶದಲ್ಲಿ ಅರ್ಜಿದಾರಿಗೆ ಇವರ "ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 6 ತಿಂಗಳ ಕಾಲ ತದನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮವಾಗದಂತೆ ತಡೆಹಿಡಿಯಲಾದ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲ್ಮನವಿಯನ್ನು ಭಾಗಶ: ಪುರಸ್ಕರಿಸಿ ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 11.02.2008ರ ಆದೇಶದಲ್ಲಿ ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮೂರು ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಯಾವುದೇ ಹೊಸ ಅಂಶಗಳನ್ನು ಪ್ರಸ್ತಾಪಿಸಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 195 ಪೊಸಿಅ 2008, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಪಿ.ಮಣಕವಾಡ, ಆರ್.ಪಿ.ಐ., ಡಿ.ಎ.ಆರ್., ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1134

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಎಂ.ಡಿ. ನಾಗರಾಜು, ಎ.ಪಿ.ಸಿ.–316, ಡಿ.ಎ.ಆರ್., ಶಿವಮೊಗ್ಗ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಇವರ ಆದೇಶ ಸಂಖ್ಯೆ:ಡಿಇ 1/2006 ಓ.ಬಿ:400/2007 ದಿ:06.11.2007.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ:28–29/ಅಪೀಲು/ಸಿಬ್ಬಂದಿ–2/2007–08 ದಿ:08.04.08.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:09.09.2008.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)73/2008–09 ದಿನಾಂಕ:05.01.2009.

**ಪ್ರಸ್ತಾವನೆ:**

ಶ್ರೀ ಎಂ.ಡಿ. ನಾಗರಾಜ್, ಎ.ಪಿ.ಸಿ.–316, ಡಿ.ಎ.ಆರ್. ಶಿವಮೊಗ್ಗ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6 ಮತ್ತು 8 ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

1) ನೀವು ಡಿಎಆರ್, ಶಿವಮೊಗ್ಗದಲ್ಲಿ ಎ.ಪಿ.ಸಿ.ಯಾಗಿ ಕರ್ತವ್ಯದಲ್ಲಿ ನಿರ್ವಹಿಸುತ್ತಿದ್ದು ವಿಚಾರಣಾಧೀನ ಖೈದಿ ಆರೋಪಿ ಹನೀಫ್‌ನ ಪಹರೆ ಕರ್ತವ್ಯಕ್ಕೆ ಮೆಗ್ಗಾನ್ ಆಸ್ಪತ್ರೆಗೆ ನೇಮಕವಾಗಿದ್ದು, ದಿ:16.06.06 ರಂದು ರಾತ್ರಿ ಕರ್ತವ್ಯಕ್ಕೆ ಬರಬೇಕಾದ ನೀವು ಮೇಲಾಧಿಕಾರಿಗಳಿಗೆ ಮಾಹಿತಿ ನೀಡದೆ ಸದರಿ ದಿನದಂದು ಕರ್ತವ್ಯಕ್ಕೆ ಹಾಜರಾಗದೇ ಅಥವಾ ಮೇಲಾಧಿಕಾರಿಗಳವರಿಂದ ಅನುಮತಿಯನ್ನು ಪಡೆಯದೇ ಇದ್ದು ದಿನಾಂಕ:16.06.06 ರಂದು ರಾತ್ರಿ 1.30ರ ಸಮಯದಲ್ಲಿ ಆರೋಪಿ ಹನೀಫ್ ಪರಾರಿಯಾಗಿದ್ದು, ಸದರಿ ಆರೋಪಿ ಪರಾರಿಯಾಗಲು ನೀವು ಸಹ ಪರೋಕ್ಷವಾಗಿ ಕಾರಣರಾಗಿ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಲೋಪ ಮತ್ತು ಬೇಜವಾಬ್ದಾರಿ ಪ್ರದರ್ಶಿಸಿರುತ್ತೀರಿ.
2) ಕಮ್ಮರಡಿ ಹನೀಫ್, ಹಂಜಾ, ಮರ್ಡರ್ ರವಿ, ಎಲ್‌ಟಿಟಿ ವೆಂಕಟೇಶ್ ಅರುಣ ಇವರೆಲ್ಲರೂ ರೂಢಿಗತ ಅಪರಾಧಿಗಳಾಗಿದ್ದು ಇವರ ಬಗ್ಗೆ ಸಂಪೂರ್ಣ ಮಾಹಿತಿ ಇದ್ದರೂ ಸಹ ಇವರುಗಳಿಗೆ ಆಸ್ಪತ್ರೆಗಳಿಗೆ ಪರಸ್ಪರ ಭೇಟಿ ಮಾಡಲು ಅವಕಾಶ ಮಾಡಿ ಕೊಟ್ಟಿದ್ದಲ್ಲದೆ ಆರೋಪಿ ಹನೀಫ್‌ಗೆ ಮಾತನಾಡಲು ಅವನ ಮೊಬೈಲ್‌ನ್ನು ಕೊಟ್ಟಿದ್ದಲ್ಲದೆ ಆರೋಪಿಗೆ ಅವನದೇ ಆದ ಮೊಬೈಲ್ ಹೊಂದಲು ಅನುವು ಮಾಡಿಕೊಟ್ಟು ಕರ್ತವ್ಯದಲ್ಲಿ ತೀವ್ರ ದುರ್ನಡತೆ ಪ್ರದರ್ಶಿಸಿರುತ್ತೀರಿ.
3) ಆರೋಪಿ ಹನೀಫ್ ಪರಾರಿಯಾಗಲು ಬಳಸಿದ ಕದ್ದ ವಾಹನ ನಂ:ಕೆಎ:ನಂ–05 ಸಿ–624 ಟಾಟಾ ಸುಮೋವನ್ನು ದಿ:08.06.06 ರಿಂದ 16.06.06 ರವರೆಗೆ ತಮ್ಮ ಮನೆಯ ಮುಂದೆ ನಿಲ್ಲಿಸಿಕೊಂಡಿದ್ದಲ್ಲದೆ ಮನೆ ಕೆಲಸಕಾರ್ಯಗಳಲ್ಲಿ ಬಳಸಿಕೊಂಡಿರುವುದು ಕಂಡುಬಂದಿದ್ದು ಕರ್ತವ್ಯದಲ್ಲಿ ತೀವ್ರ ದುರ್ನಡತೆ ಪ್ರದರ್ಶಿಸಿರುತ್ತೀರಿ.''

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:06.11.2007ರ ಆದೇಶದಲ್ಲಿ ''ಇವರನ್ನು ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸಿ, ದಿ:17.06.06 ರಿಂದ 06.01.2007ರ ವರೆಗೆ ಅಮಾನತ್ತಿನಲ್ಲಿದ್ದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ್ದಾರೆ.''

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವವಲಯ, ದಾವಣಗೆರೆ, ಇವರು ಮೇಲ್ಮನವಿಯನ್ನು ಮಾನವೀಯ ದೃಷ್ಠಿಯಿಂದ ಭಾಗಶ: ಪರಿಗಣಿಸಿ, ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 08.04.08ರ ಆದೇಶದಲ್ಲಿ ''ಇವರ ವೇತನವನ್ನು ಪೊಲೀಸ್ ಪೇದೆಯ ಹುದ್ದೆಯ ಕನಿಷ್ಠ ವೇತನ ಮಟ್ಟಕ್ಕೆ 3 ವರ್ಷಗಳ ಕಾಲ ಕೆಳಗಿಳಿಸಿ ಅಮಾನತ್ತಿನ ಅವಧಿಯನ್ನು ಅಮಾನತ್ತಿನ ಅವಧಿಯೆಂದು ಪರಿಗಣಿಸಿ, ಸದರಿಯವರು ವಜಾಗೊಂಡ ದಿನಾಂಕದಿಂದ ಸೇವೆಯಲ್ಲಿ ಮರುನೇಮಕವಾಗುವ ತನಕದ ಅವಧಿಯನ್ನು ವೇತನ ರಹಿತ ರಜೆಯೆಂದು ಪರಿಗಣಿಸಿದ್ದಾರೆ.''

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ.

ಪರಿಷ್ಕರಣ ಮೇಲ್ಮನವಿಯಲ್ಲಿ ಹೊಸ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 305 ಪೊಸಿಅ 2008, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಡಿ. ನಾಗರಾಜ್, ಎ.ಪಿ.ಸಿ.–316, ಡಿ.ಎ.ಆರ್. ಶಿವಮೊಗ್ಗ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1135

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ರುದ್ರೇಶ್ವರ ಜಿ.ಎಲ್. ಸಿ.ಪಿ.ಸಿ.1398, ನ್ಯೂಟೌನ್ ಪೊಲೀಸ್ ಠಾಣೆ, ಭದ್ರಾವತಿ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ, ಇವರ ಆದೇಶ ಸಂಖ್ಯೆ:ಸಿಬ್ಬಂದಿ (4)ಶಿಕ್ಷೆ/27:06 ಓ.ಬಿ:246/06 ದಿ:05.08.2006.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ:33/ಅಪೀಲು/ಸಿಬ್ಬಂದಿ/2/2006–07 ಓ.ಬಿ:109/07 ದಿ:23.07.2007.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:04.11.2008.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)97/2008–09 ದಿನಾಂಕ:06.02.2009.

**ಪ್ರಸ್ತಾವನೆ:**

ಶ್ರೀ ರುದ್ರೇಶ್ವರ ಜಿ.ಎಲ್., ಸಿ.ಪಿ.ಸಿ–1398, ನ್ಯೂಟೌನ್ ಪೊಲೀಸ್ ಠಾಣೆ, ಭದ್ರಾವತಿ, ಇವರು ಹೊಸದುರ್ಗ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ಲೋಪ ಮತ್ತು ದುರ್ನಡತೆ ಪ್ರದರ್ಶಿಸಿದ ಕಾರಣಕ್ಕಾಗಿ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆ ಹೊರಿಸಲಾಗಿದೆ.

**ದೋಷರೋಪಣೆ:**

"ನೀವುಗಳು ದಿ:31.10.05 ರಂದು ಸಂಜೆ 6.00 ಗಂಟೆ ಸಮಯದಲ್ಲಿ ಶ್ರೀ ಕೆ.ಎಂ. ಮಹೇಶ್, ಬಿನ್ ಮಂಜಪ್ಪಗೌಡ, ಇವರ ಮಳಿಗೆಗೆ ನುಗ್ಗಿ ಅವರಿಗೆ ಪೆಟ್ರೋಲ್ ಡೀಸೆಲ್‌ನ್ನು ಕಳ್ಳತನದಲ್ಲಿ ಮಾರುತ್ತೀಯ ಎಂದು ಹೇಳಿ 40ಲೀ. ಡೀಸೆಲ್ ಹಾಗೂ 10ಲೀ. ಪೆಟ್ರೋಲ್ ತೆಗೆದುಕೊಂಡು ಮಹೇಶ್‌ರವರನ್ನೂ ಸಹ ಠಾಣೆಗೆ ಕರೆದುಕೊಂಡು ಹೋಗಿ ಅವರನ್ನು ಬಿಡಲು ರೂ.13,000–00 ಅಕ್ರಮ ಸಂಭಾವನೆ ಪಡೆದು ಶಿಸ್ತಿನ ಇಲಾಖೆಯ ಗೌರವಕ್ಕೆ ಧಕ್ಕೆ ತರುವಂತೆ ವರ್ತಿಸಿ ಕರ್ತವ್ಯದಲ್ಲಿ ತೀವ್ರ ಲೋಪ ಮತ್ತು ದುರ್ನಡತೆ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧಿಕ್ಷಕರು, ಶಿವಮೊಗ್ಗ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ: 05.08.2006ರ ಆದೇಶದಲ್ಲಿ "ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ 2 ವರ್ಷಗಳ ಕಾಲ ಮುಂದೂಡಿ ದಿ:22.11.05 ರಿಂದ 10.03.06ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮನತ್ತೆಂದೇ ಪರಿಗಣಿಸಿ ಆದೇಶಿಸಿದ್ದಾರೆ."

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವವಲಯ, ದಾವಣಗೆರೆ, ಇವರು ಮೇಲ್ಮನವಿಯನ್ನು ಭಾಗಶ: ಪುರಸ್ಕರಿಸಿ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 23.07.2007ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಂಡನೆಯ ಆದೇಶವನ್ನು ಭಾಗಶ: ಮಾರ್ಪಡಿಸಿ, ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮೂರು ತಿಂಗಳ ಕಾಲ ಮುಂದೂಡಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ

ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ದುರ್ನಡತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 367 ಪೊಸಿಅ 2008, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರುದ್ರೇಶ್ವರ ಜಿ.ಎಲ್., ಸಿ.ಪಿ.ಸಿ–1398, ನ್ಯೂಟೌನ್ ಪೊಲೀಸ್ ಠಾಣೆ, ಭದ್ರಾವತಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1136 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಸಿ.ಎ. ಕಲಬುರ್ಗಿ, ಸಿಪಿಸಿ–881, ಇವರು ಬಾಗಲಕೋಟೆ ನಗರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ 3/ಡಿಇ–2/2006, ಅ.ಪು.ಸಂ:239/2007 ದಿ:18.07.07.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ:ಅಪೀಲು 175/ಉವ/2007–08–09 ದಿ:08.03.08.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:30.07.08.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)50/2008–09 ದಿನಾಂಕ:06.02.2009.

**ಪ್ರಸ್ತಾವನೆ:**

ಶ್ರೀ ಸಿ.ಎ.ಕಲಬುರ್ಗಿ, ಸಿಪಿಸಿ–881, ಇವರು ಬಾಗಲಕೋಟೆ ನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರ ಜೊತೆ ಇತರೆ ಪೊಲೀಸ್ ಸಿಬ್ಬಂದಿಗಳ ವಿರುದ್ಧ ಕರ್ತವ್ಯದಲ್ಲಿ ಘೋರ ದುರ್ನಡತೆ, ಅಶಿಸ್ತು, ನಿರ್ಲಕ್ಷತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6 ಮತ್ತು 8ರಡಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

"ದಿ:24.02.2006 ರಂದು 12.30 ಗಂಟೆಯಿಂದ 13.00 ಗಂಟೆಯ ಅವಧಿಯಲ್ಲಿ ಬಾಗಲಕೋಟೆ ಶಹರದ ಸಿ.ಟಿ.ಎಸ್. ನಂ:8/5ಬಿ ನೇದ್ದರಲ್ಲಿ ಇರುವ ಭಾಗವಾನ ಚಾಳ ರೂಂ ನಂ:12ರಲ್ಲಿ ಒಬ್ಬ ಸಾರ್ವಜನಿಕ ವ್ಯಕ್ತಿಯೊಂದಿಗೆ ಜೊತೆಗೂಡಿ ಇಸ್ಪೀಟ ಎಲೆಗಳ ಮೇಲೆ ಹಣ ಹಚ್ಚಿ ಸ್ವಂತ ಲಾಭಕ್ಕೋಸ್ಕರ 'ಅಂದರ ಬಾಹರ" ಎಂಬ ಮನ್ನಾ ಜೂಜಾಟ ಆಡುತ್ತಿರುವಾಗ ಸಿ.ಪಿ.ಐ. ಬಾಗಲಕೋಟೆ ಶಹರ ವೃತ್ತ, ಇವರು ದಾಳಿ ಮಾಡಿದಾಗಿ ಸಿಕ್ಕು ಬಿದ್ದು ಒಟ್ಟು ಹಣ 1,285–00 ರೂ.ಗಳನ್ನು ಜಪ್ತಮಾಡಿಕೊಂಡು ನಿಮ್ಮೆಲ್ಲರನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿಕೊಂಡು ಶಹರ ಠಾಣೆಯಲ್ಲಿ ಪ್ರಕರಣ ಸಂಖ್ಯೆ:44/2006 ಕಲಂ 79, 80 ಕೆ.ಪಿ. ಆಕ್ಟ್ ನೇದ್ದರ ಅಡಿಯಲ್ಲಿ ಪ್ರಕರಣ ದಾಖಲು ಮಾಡಿಸಿಕೊಂಡಿರುತ್ತಾರೆ. ಈ ಪ್ರಕಾರ ನೀವು ಸಮಾಜ ಘಾತುಕ ಶಕ್ತಿಯಲ್ಲಿ ಒಂದಾದ ಕಾನೂನುಬಾಹಿರ ಅಕ್ರಮ ಚಟುವಟಿಕೆಯಂತಹ ಇಸ್ಪೀಟ ಜೂಜಾಟ ಹತ್ತಿಕ್ಕುವ ನಿಟ್ಟಿನಲ್ಲಿ ಪ್ರಯತ್ನಿಸದೇ ಸ್ವತ:ಸಾರ್ವಜನಿಕರೊಂದಿಗೆ ಸೇರಿ ಜೂಜಾಟ ಆಡಿ ಅಪರಾಧ ಪ್ರಕರಣದಲ್ಲಿ ಭಾಗಿಯಾಗಿ ನೀವು ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆ, ಅಶಿಸ್ತು, ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ್ದೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 18.07.07ರ ಆದೇಶದಲ್ಲಿ "ಇವರ ಮೂಲ ವೇತನದಲ್ಲಿನ 3 ಹಂತಗಳನ್ನು ತದನಂತರದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ 2 ವರ್ಷಗಳ ಕಾಲ ಕೆಳಗಿಳಿಸಿ, ದಿ:24.02.2006 ರಿಂದ 02.06.2006ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿ ಆದೇಶಿಸಿದ್ದಾರೆ."

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲ್ಮನವಿಯನ್ನು ಪರಿಶೀಲಿಸಿ ಅರ್ಜಿದಾರರಿಗೆ

ಸುಧಾರಿಸಿಕೊಳ್ಳಲು ಆಸ್ಪದ ನೀಡುವ ಸಲುವಾಗಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶ: ಮಾರ್ಪಡಿಸಿ, "ಇವರ ಮೂಲ ವೇತನದಲ್ಲಿನ ಮೂರು ಹಂತಗಳನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಒಂದು ವರ್ಷಕಾಲ ಕೆಳಗಿಳಿಸಿ ಅಮಾನತ್ತಿನ ಅವಧಿ ದಿ:24.02.2006 ರಿಂದ 02.06.2006ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ, ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿ:08.03.08ರ ಆದೇಶದಲ್ಲಿ ಮೇಲ್ಮನವಿಯನ್ನು ಪರಿಗಣಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇವರ ವಿರುದ್ಧದ ಇಲಾಖಾ ವಿಚಾರಣೆಯಲ್ಲಿ ಆರೋಪವು ಸಾಬೀತಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 237 ಪೊಸಿಅ 2008, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ.ಎ. ಕಲಬುರ್ಗಿ, ಸಿಪಿಸಿ–881, ಬಾಗಲಕೋಟೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1137

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಎಂ.ಕೆ. ನಾರಾಯಣಕರ್, ಸಿ.ಪಿ.ಸಿ.–583, ನರಗುಂದ, ಗದಗ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗದಗ, ಇವರ ಆದೇಶ ಸಂಖ್ಯೆ:ಡಿಇ:ಪಿಆರ್:145/99 ಗದಗ ಜಿಲ್ಲೆ, ಗದಗ, ಅ.ಪು:108/2000 ದಿ:09.03.2000.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ:ಅಪೀಲು/36/ಉವ/2000 ದಿ:31.07.2002.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:28.07.07.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)56/2007–08 ದಿನಾಂಕ:20.01.2009.

**ಪ್ರಸ್ತಾವನೆ:**

ಶ್ರೀ ಎಂ.ಕೆ. ನಾರಾಯಣಕರ್, ಸಿ.ಎಚ್.ಸಿ.–583, ಇವರು ಆಡೂರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ದುರ್ನಡತೆ, ಬೇಜವಾಬ್ದಾರಿತನ ಹಾಗೂ ಕರ್ತವ್ಯಚ್ಯುತಿ ಮಾಡಿದ್ದಾರೆ ಎಂಬ ಕಾರಣಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

"ನೀವು ಸಿ.ಪಿ.ಸಿ. ಅಂತಾ ಆಡೂರ ಪೊಲೀಸ್ ಠಾಣೆ, ಸದ್ಯ ಬೆರಳು ಮುದ್ರೆ ವಿಭಾಗ ಜಿಲ್ಲಾ ಪೊಲೀಸ್ ಕಾರ್ಯಾಲಯ, ಗದಗದಲ್ಲಿ ಸೇವೆ ಸಲ್ಲಿಸುತ್ತಿರುವಿರಿ. ನೀವು ಆಡೂರ ಠಾಣೆಯಲ್ಲಿ ಸೇವೆ ಸಲ್ಲಿಸುತ್ತಿರುವಾಗ ಈ ಕೆಳಕಂಡ ಅಪಾದನೆಗೆ ಗುರಿಯಾಗಿರುವಿರಿ.

ದಿ:03.04.1977ರ ರಾತ್ರಿ 8.00 ಗಂಟೆಯ ಹಾಜರಿಗೆ ಹಾಗೂ ಅಂದೇ ರಾತ್ರಿ ಗಸ್ತು ಕರ್ತವ್ಯಕ್ಕೆ ಕೂಡಾ ಅನಧಿಕೃತ ಗೈರುಹಾಜರಾಗಿ ರಾತ್ರಿ 2.30 ಗಂಟೆಗೆ ಹಾನಗಲ್–ಪಾಳಾ ರಸ್ತೆಯ ಮೇಲೆ ಹಲಗಿನ ಕೊಪ್ಪದ ಹತ್ತಿರ ಚಕ್ಕಡಿಯಲ್ಲಿ ಅನಧಿಕೃತವಾಗಿ ಪಾಸ್‌ವ ಪರ್ಮಿಟ್ ಇಲ್ಲದೆ ಸರ್ಕಾರಿ ಅರಣ್ಯದಿಂದಾ ಸಾಗುವಾನಿ ಕಟ್ಟಿಗೆಯ ತುಂಡುಗಳನ್ನು ಸಾಗಿಸುವಾಗ ಅರಣ್ಯ ಇಲಖೆಯವರ ಕೈಯಲ್ಲಿ ಸಿಲುಕಿ ಕರ್ತವ್ಯದಲ್ಲಿ ಅತೀವ ದುರ್ನಡತೆ ಬೇಜವಾಬ್ದಾರಿತನ ಹಾಗೂ ಕರ್ತವ್ಯಚ್ಯುತಿ ಪ್ರದರ್ಶಿಸಿದ್ದೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗದಗ ಜಿಲ್ಲೆ, ಗದಗ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 09.03.2000ರ ಆದೇಶದಲ್ಲಿ "ಇವರ ವೇತನವನ್ನು ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಯ ಕನಿಷ್ಠ ಶ್ರೇಣಿಗೆ ಮೂರು ವರ್ಷಗಳ ಕಾಲ ಇಳಿಸಲಾಗಿದೆ ಹಾಗೂ ದಿ:20.04.97 ರಿಂದ 14.11.97ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮನಾತ್ತೆಂದೇ ಪರಿಗಣಿಸಿ ಆದೇಶಿಸಿದ್ದಾರೆ."

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಶಿಸ್ತುಪ್ರಾಧಿಕಾರದ ದಂಡನೆಯು ದೋಷಾರೋಪಕ್ಕೆ ಅನುಗುಣವಾಗಿಲ್ಲವೆಂದು ಅಭಿಪ್ರಾಯವನ್ನಿಟ್ಟು ಶಿಸ್ತು ಪ್ರಾಧಿಕಾರದ ದಂಡನೆಯನ್ನು ಭಾಗಶ: ಮಾರ್ಪಡಿಸಿ, ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 31.07.2002ರ ಆದೇಶದಲ್ಲಿ "ಇವರ ವೇತನವನ್ನು ಪಿ.ಸಿ.ಹುದ್ದೆಯ ಕನಿಷ್ಠ ವೇತನ ಶ್ರೇಣಿಗೆ ಎರಡು ವರ್ಷಗಳ ಕಾಲ ಇಳಿಸುವ ದಂಡನೆ ವಿಧಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಆರೋಪ ಸಾಬೀತಾಗಿದ್ದು, ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಹೊಸ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 54 ಪೊಸಿಅ 2009, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಕೆ. ನಾರಾಯಣಕರ್, ಸಿ.ಎಚ್.ಸಿ.583, ಗದಗ ಜಿಲ್ಲೆ, ಗದಗ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1138 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಎಚ್. ಮಲ್ಲಿಕಾರ್ಜುನ್ಸ್ವಾಮಿ, ಪಿ.ಸಿ. ಮಹದೇಶ್ವರ ಪೊಲೀಸ್ ಠಾಣೆ, ಚಾಮರಾಜನಗರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಚಾಮರಾಜನಗರ, ಇವರ ಆದೇಶ ಸಂಖ್ಯೆ: ಡಿಇ/ಶಿಕ್ಷೆ:07/2006–07 ಓ.ಬಿ:182/2007 ದಿ:31.10.2007.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ:ಅಪೀಲು/55/2007–08 ಓ.ಬಿ:5/2008–09 ದಿ:24.04.08.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:27.08.2008.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)84/2008–09 ದಿನಾಂಕ:05.01.2009.

**ಪ್ರಸ್ತಾವನೆ:**

ಶ್ರೀ ಎಚ್. ಮಲ್ಲಿಕಾರ್ಜುನಸ್ವಾಮಿ, ಪಿ.ಸಿ., ಮಹದೇಶ್ವರ ಪೊಲೀಸ್ ಠಾಣೆ, ಕೊಳ್ಳೇಗಾಲ ವೃತ್ತ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಲೋಪವೆಸಗಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಸಿ.ಪಿ.ಐ. ಕೊಳ್ಳೇಗಾಲ ವೃತ್ತ ರವರು ಉಲ್ಲೇಖಿತ ತಮ್ಮ ವರದಿಯಲ್ಲಿ ವಿವರಿಸಿರುವಂತೆ ಕೊಳ್ಳೇಗಾಲ ಪಟ್ಟಣ ಪೊಲೀಸ್ ಠಾಣೆಯಲ್ಲಿ ದಿ:12.12.2006 ರಂದು ಆರೋಪಿ ಸಿದ್ದಲಿಂಗಸ್ವಾಮಿ ಹಾಗೂ ಇತರರ ಮೇಲೆ ಠಾಣಾ ಮೊ.ಸಂ:106/2006, ಕಲಂ 489 (ಎ)(ಬಿ)(ಡಿ), 420 ರೆ/ವಿ 34 ಐಪಿಸಿ ರೀತ್ಯಾ ಕೇಸು ನೊಂದಾಯಿಸಿ ಆರೋಪಿಗಳಿಂದ ಖೋಟಾ ನೋಟು ತಯಾರು ಮಾಡಲು ಉಪಯೋಗಿಸಿದ್ದ ಕಂಪ್ಯೂಟರ್ ಉಪಕರಣಗಳು ಹಾಗೂ ಜನರುಗಳಿಗೆ ವಂಚಿಸಿದ್ದ ಚಿನ್ನದ ಒಡವೆಗಳನ್ನು ಅಮಾನತ್ತುಪಡಿಸಿ ಆರೋಪಿಗಳ ಮೇಲೆ ಘನ ನ್ಯಾಯಾಲಯಕ್ಕೆ ದೋಷಾರೋಪಣ ಪಟ್ಟಿ ಸಲ್ಲಿಸಲಾಗಿತ್ತು.

ಸದರಿ ಕೇಸಿನ ಮುಖ್ಯ ಆರೋಪಿ ಸಿದ್ದಲಿಂಗಸ್ವಾಮಿ ಬೆಂಗಳೂರಿನಲ್ಲಿರುವ ಶ್ರೀ ಮಂಗಲದಾಸ್ ವಿನಾಯಕ್ ರಾಯ್ಕರ್, ಚಿನ್ನ ಬೆಳ್ಳಿ ವ್ಯಾಪಾರಿ, ಜಯನಗರ, ಬೆಂಗಳೂರು, ರವರಿಗೆ ವಂಚಿಸಿ ಸುಮಾರು 75 ಗ್ರಾಂ ಚಿನ್ನದ ಒಡವೆಗಳನ್ನು ಮೋಸಮಾಡಿ ವಂಚಿಸಿ ಸದರಿ ಒಡವೆಗಳನ್ನು ಕೇಸಿನ ತನಿಖಾ ಕಾಲದಲ್ಲಿ ಅಮಾನತ್ತುಪಡಿಸಿ ಠಾಣಾ ಮಾಲು ಪಟ್ಟಿಯಲ್ಲಿ ನಮೂದಿಸಿ ನ್ಯಾಯಾಲಯದ ಅನುಮತಿ ಪಡೆದು ಠಾಣೆಯಲ್ಲಿ ಇಟ್ಟುಕೊಳ್ಳಲಾಗಿತ್ತು.

ಕೇಸಿನಲ್ಲಿ ಅಮಾನತ್ತುಪಡಿಸಿದ ಚಿನ್ನದ ಒಡವೆಗಳ ಮಾಲಿಕರಾದ ಶ್ರೀ ಮಂಗಳದಾಸ್ ವಿನಾಯಕ ರಾಯ್ಕರ್‌ರವರು ಸದರಿ ಒಡವೆಗಳನ್ನು ಗುರುತಿಸಲು ಹಾಗೂ ಅವರ ಹೇಳಿಕೆಗಳನ್ನು ದಾಖಲು ಮಾಡುವ ಸಲುವಾಗಿ ಅವರನ್ನು ದಿ:27.02.2007 ರಂದು ಕೊಳ್ಳೇಗಾಲ ಪೊಲೀಸ್ ವೃತ್ತ ಕಛೇರಿಗೆ ಬರಲು ತಿಳಿಸಲಾಗಿತ್ತು. ಅದರಂತೆ ಅವರು ದಿ:27.02.2007 ರಂದು ಅವರ ಹೆಂಡತಿ ಶ್ರೀಮತಿ ದೀಪಾ ಕೋಂ ಮಂಗಲದಾಸ್ ವಿನಾಯಕ ರಾಯರ್ ಹಾಗೂ ಸ್ನೇಹಿತರಾದ ಶ್ರೀ ಮೋಹನ್ ಮತ್ತು ಅವರ ಪತ್ನಿ ಶ್ರೀಮತಿ ಸೌಭಾಗ್ಯ ಮೋಹನ್‌ರವರುಗಳು ತನ್ನ ಕಛೇರಿಗೆ ಬಂದು ತಾನು ಕಛೇರಿಗೆ ಬರುವುದಕ್ಕಿಂತ ಮುಂಚಿತವಾಗಿ ಕಛೇರಿಯಲ್ಲಿದ್ದ ಮಲ್ಲಿಕಾರ್ಜುನ ಸ್ವಾಮಿಯವರನ್ನು ಭೇಟಿ ಮಾಡಿ ತಾವು ವಂಚನೆಗೆ ಒಳಗಾದ ವಿಚಾರ ತಿಳಿಸಿ ತಾವು ಕಳೆದುಕೊಂಡಿರುವ ಚಿನ್ನದ ಒಡವೆಗಳನ್ನು ಪಡೆಯಲು ಅನುಸರಿಸಬೇಕಾದ ಕ್ರಮಗಳ ಬಗ್ಗೆ ಕೇಳಿದಾಗ ಸದರಿ ರೈಟರ್ ಮಲ್ಲಿಕಾರ್ಜುನ ಸ್ವಾಮಿರವರು ಶ್ರೀ ಮಂಗಲದಾಸ್ ವಿನಾಯಕ ರಾಯ್ಕರ್ ಅವರ ಪತ್ನಿ ದೀಪಾ ಸ್ನೇಹಿತರಾದ ಮೋಹನ್ ಮತ್ತು ಶ್ರೀಮತಿ ಸೌಭಾಗ್ಯ ಮೋಹನ್‌ರವರುಗಳನ್ನು ಕುರಿತು ಕೇಸಿನಲ್ಲಿ ಅಮಾನತ್ತುಪಡಿಸಿರುವ ನಿಮ್ಮ ಬಾಬ್ತು ಚಿನ್ನದ ಒಡವೆಗಳಲ್ಲಿ ಒಂದಾದ ಚಿನ್ನದ ನೆಕ್‌ಲೆಸ್ ಅನ್ನು ನೀವು ಗುರುತಿಸಬೇಡಿ. ಅದು ಈಗಾಗಲೇ ಬೇರೆಯವರಿಗೆ ಆಗಿದೆ. ನಿಮಗೆ ಅದರ ಬದಲಾಗಿ ಬೇರೆ ಚಿನ್ನದ ಒಡವೆಗಳನ್ನು ಕೊಡಿಸುತ್ತೇನೆ. ತಾನು ಹೇಳಿದ ಹಾಗೆ ಕೇಳದಿದ್ದರೆ ಒಡವೆಗಳನ್ನು ಹೇಗೆ ಬಿಡಿಸಿಕೊಳ್ಳುತ್ತೀರೋ ನಾನು ನೋಡಿಕೊಳ್ಳುತ್ತೇನೆ ಎಂದು ಹೆದರಿಸಿ ಸವಾಲು ಹಾಕಿ ಅವಾಚ್ಯ ಶಬ್ದಗಳಿಂದ ನಿಂದಿಸಿ ಮಾತನಾಡಿ ಸಾರ್ವಜನಿಕರಿಗೆ ಪೊಲೀಸ್ ಇಲಾಖೆಯ ಬಗ್ಗೆ ಅಗೌರವ ಭಾವನೆ ಉಂಟಾಗಲು ಕಾರಣರಾಗಿರುತ್ತಾರೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಚಾಮರಾಜನಗರ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 31.10.2007ರ ಆದೇಶದಲ್ಲಿ "ಅರ್ಜಿದಾರರ ಮುಂದಿನ ವಾರ್ಷಿಕ ವೇತನವನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ 06 ತಿಂಗಳ ಕಾಲ ಮುಂದೂಡುವ ದಂಡನೆ ವಿಧಿಸಿರುತ್ತಾರೆ, ಅಮಾನತ್ತಿನಲ್ಲಿದ್ದ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 24.04.08ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಇವರ ವಿರುದ್ಧದ ಆರೋಪವು ಸಾಕ್ಷ್ಯಾಧಾರಗಳಿಂದ ಸಾಬೀತಾಗಿರುತ್ತದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಹೊಸ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 348 ಪೊಸಿಅ 2008, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಚ್. ಮಲ್ಲಿಕಾರ್ಜುನಸ್ವಾಮಿ, ಪಿ.ಸಿ., ಮಹದೇಶ್ವರ ಪೊಲೀಸ್ ಠಾಣೆ, ಚಾಮರಾಜನಗರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1139 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಅಮರಪ್ಪ ಪೂಜಾರ್, ಎ.ಎಸ್.ಐ., ರಾಯಚೂರು ಸಂಚಾರ ಪೊಲೀಸ್ ಠಣೆ, ರಾಯಚೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ರಾಯಚೂರು, ಇವರ ಆದೇಶ ಸಂಖ್ಯೆ: ಸಿಬ್ಬಂದಿ(3)/ಇವಿ/6/02 ಓ.ಬಿ:1467/06 ದಿ:06.02.2006.

2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ:ಅಪೀಲು/71/ಈವ/2007 ಅ.ಪು.ಸಂ:63/ಈವ/07 ದಿ:20.11.07.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:06.08.08.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)53/2008–09 ದಿನಾಂಕ:12.01.2009.

**ಪ್ರಸ್ತಾವನೆ:**

ಶ್ರೀ ಅಮರಪ್ಪ ಪೂಜಾರ್, ಎ.ಎಸ್.ಐ., ರಾಯಚೂರು ಸಂಚಾರ ಪೊಲೀಸ್ ಠಾಣೆ, ರಾಯಚೂರು, ಇವರು ಕವಿತಾಳ ಪೊಲೀಸ್ ಠಾಣೆಯಲ್ಲಿ ಎಚ್.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

1. "ನೀವು ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿದ್ದುಕೊಂಡು ಯಾರದೇ ಪರವಾನಿಗೆಯನ್ನು ಪಡೆಯದೆ ನೀವು ಕರ್ತವ್ಯ ನಿರ್ವಹಿಸುತ್ತಿರುವ ಕವಿತಾಳ ಪೊಲೀಸ್ ಠಾಣೆಯ ಕೇಂದ್ರ ಸ್ಥಾನ ಬಿಟ್ಟು ದಿ:25.04.2002 ರಂದು ರಾಯಚೂರಿಗೆ ಬಂದಿರುತ್ತೀರಿ.
2. ನೀವು ಅದೇ ದಿವಸ ಅಂದರೆ ದಿ:25.04.2002 ರಂದು ರಾತ್ರಿ 11.00 ಗಂಟೆಗೆ ಕು:ಬಸಮ್ಮ ತಂದೆ ಮಲ್ಲನಗೌಡ ಪಾಟೀಲ್ ನ್ಯಾಯವಾದಿಗಳು ಸಾ: ರಾಯಚೂರು ಇವರ ಮನೆಯಲ್ಲಿ ಅತಿಕ್ರಮ ಪ್ರವೇಶಮಾಡಿ ಬಸಮ್ಮ ಇವರಿಗೆ ಒಂದು ಲಕ್ಷ ರೂಪಾಯಿಗಳನ್ನು ಕೊಡು ಅಂತಾ ಕೇಳಿದ್ದು, ಅವರು ಇಲ್ಲ ಅಂದದ್ದಕ್ಕೆ ಅವಾಚ್ಯ ಶಬ್ದಗಳಿಂದ ಬೈದು ಬಸಮ್ಮಳ ಕುತ್ತಿಗೆ ಹಿಚುಕುವಾಗ ಬಿಡಿಸಲು ಬಂದ ಮಲ್ಲಮ್ಮ, ಇವರ ಮುಖಕ್ಕೆ ಹೊಡೆದು ಬಸಮ್ಮಗಳಿಗೆ ಸಾಯಿಸುತ್ತೇನೆ ಅಂತಾ ಚಾಕು ತೋರಿಸಿ ಜೀವದ ಬೆದರಿಕೆ ಹಾಕಿ ಅವರಿಗೆ ಕೈಗಳಿಂದ ಹೊಡೆದು ಅವರ ಮನೆಯಲ್ಲಿದ್ದ ಏರ್ ಕೂಲರ್‌ನ್ನು ಒದ್ದು ಜಖಂಗಳಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ರಾಯಚೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 06.02.2006ರ ಆದೇಶದಲ್ಲಿ "ಇವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗುವಂತೆ ಆರು ತಿಂಗಳು ಕಾಲ ಮುಂದೂಡಿ, ದಿ:27.04.02 ರಿಂದ 13.08.2002ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸುವ ದಂಡನೆಯನ್ನು ವಿಧಿಸಿದ್ದಾರೆ."

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯವಲಯ, ಗುಲ್ಬರ್ಗಾ, ಇವರು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 20.11.07ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇವರ ವಿರುದ್ಧದ ಆರೋಪವು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಸಮರ್ಥನೀಯ ಅಂಶಗಳು ಯಾವುದೂ ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ:ಒಇ 249 ಪೊಶಿಅ 2008, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಅಮರಪ್ಪ ಪೂಜಾರ್, ಎ.ಎಸ್.ಐ., ರಾಯಚೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1140

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಗುಲ್ಬರ್ಗಾ ವಿಭಾಗದ 5 ಜಿಲ್ಲೆಗಳಲ್ಲಿ ಬಡತನ ರೇಖೆಗಿಂತ ಕೆಳಗಿರುವ ಕುಟುಂಬ ವರ್ಗದವರಿಗೆ "ಸುವರ್ಣ ಆರೋಗ್ಯ ಸುರಕ್ಷಾ" ಎಂಬ ಒಂದು ಹೊಸ ಆರೋಗ್ಯ ವಿಮೆ ಯೋಜನೆಯನ್ನು ಜಾರಿಗೆ ತರುವ ಬಗ್ಗೆ.

**ಓದಲಾಗಿದೆ:** (1) ದಿನಾಂಕ 29-9-2007 ರಂದು ಮುಖ್ಯ ಕಾರ್ಯದರ್ಶಿರವರ ಅಧ್ಯಕ್ಷತೆಯಲ್ಲಿ ನಡೆದ ಸಭೆ ನಡವಳಿಗಳು.

(2) ಯೋಜನಾ ಆಡಳಿತಾಧಿಕಾರಿ, ಕರ್ನಾಟಕ ಆರೋಗ್ಯ ಪದ್ದತಿ ಅಭಿವೃದ್ಧಿ ಸುಧಾರಣೆ ಯೋಜನೆ ರವರ ಏಕ ಕಡತ ಪದ್ದತಿಯಡಿ ಸಲ್ಲಿಸಿದ ಪ್ರಸ್ತಾವನೆ ಸಂಖ್ಯೆ: ಹೆಚ್‌ಎಫ್‌ಡಬ್ಲ್ಯೂ/ ಕೆ.ಹೆಚ್.ಎಸ್.ಡಿ.ಆರ್.ಪಿ/ ಹಚ್.ಐಎನ್‌ಎಸ್/01-08-09 ದಿನಾಂಕ 11-8-2008

(3) ಸಚಿವ ಸಂಪುಟವು ವಿಷಯ ಸಂಖ್ಯೆ:119/2009 ದಿನಾಂಕ 18-2-2009 ರಲ್ಲಿ ನೀಡಿರುವ ಅನುಮೋದನೆ.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯದಲ್ಲಿ ಬಡತನ ರೇಖೆಗಿಂತ ಕೆಳಗಿರುವ ಜನರಿಗೆ ಆರೋಗ್ಯ ವಿಮೆ ಜಾರಿಗೊಳಿಸುವ ಪ್ರಸ್ತಾವನೆ ಕೆಲವು ಕಾಲದಿಂದ ಸರ್ಕಾರದ ಪರಿಶೀಲನೆಯಲ್ಲಿದೆ. ರಾಜ್ಯದಲ್ಲಿನ ಬಡತನ ರೇಖೆಗಿಂತ ಕೆಳಗಿರುವವರು ಒಮ್ಮೆಲೆ ದುರಂತ ಉಂಟು ಮಾಡುವ (catastrophic) ಆರೋಗ್ಯ ಆಘಾತಕ್ಕೆ ಒಳಗಾಗುತ್ತಾರೆ. ರಾಜ್ಯದಲ್ಲಿ ಪ್ರಸ್ತುತ ಇರುವ ಆರೋಗ್ಯ ವಿಮೆ ಕಾರ್ಯಕ್ರಮಗಳು ರಾಜ್ಯದಲ್ಲಿ ಬಡತನ ರೇಖೆಗಿಂತ ಕೆಳಗಿರುವ ಜನರಿಗೆ ಬಹಳ ಕಡಿಮೆ ಪ್ರಮಾಣದಲ್ಲಿ ತಲುಪುತ್ತಿವೆ. ಕರ್ನಾಟಕದಲ್ಲಿ ಇತರೆ ಇಲಾಖೆಗಳ ಮೂಲಕ ಅಂದರೆ ಸಹಕಾರ ಇಲಾಖೆಯ ಮೂಲಕ ಯಶಸ್ವಿನಿ ಯೋಜನೆ, ಕಾರ್ಮಿಕ ಇಲಾಖೆಯ ಮೂಲಕ ರಾಷ್ಟ್ರೀಯ ಸ್ವಾಸ್ಥ ಭೀಮಾ ಯೋಜನೆ ಮತ್ತು ಕಂದಾಯ ಇಲಾಖೆಯ ಮೂಲಕ ಆಮ್ ಆದ್ಮಿ ಭಿಮಾ ಯೋಜನೆ ಇತ್ಯಾದಿಗಳನ್ನು ಜಾರಿಗೊಳಿಸಲಾಗುತ್ತಿದೆ. ಯಶಸ್ವಿನಿ ಯೋಜನೆಯನ್ನು ವಿಶ್ಲೇಷಿಸಿದಾಗ ತಿಳಿದು ಬರುವುದೇನೆಂದರೆ, ಅದು ಸಹಕಾರಿ ಸಂಘಗಳ ಸದಸ್ಯರಿಗೆ ಮಾತ್ರ ಲಭ್ಯವಿದ್ದು, 1600 ಶಸ್ತ್ರಚಿಕಿತ್ಸೆಗಳ ಒಳಪಡಿಸುವಿಕೆ ಮತ್ತು ಆಯ್ದ ತುರ್ತು ವೈದ್ಯಕೀಯ ಚಿಕಿತ್ಸೆಗಳಿಗೆ ಸೀಮಿತವಾಗಿದೆ. ಯಶಸ್ವಿನಿ ಯೋಜನೆಯಡಿ ಒಂದಾದ ನ್ಯೂನತೆ ಎಂದರೆ ಸಹಕಾರಿ ಸಂಘದ ಸದಸ್ಯರಾಗಿರದಿದ್ದಲ್ಲಿ ಅವರು ಬಡತನ ರೇಖೆಗಿಂತ ಕೆಳಗಿದ್ದರೂ ಸಹ ಹೊರತುಪಡಿಸಲಾಗಿದೆ. ಅದರಡಿ ನಗರ ಪ್ರದೇಶದ ಜನರನ್ನು ಅವರು ಸಹಕಾರಿ ಸಂಘದ ಸದಸ್ಯರಾಗಿದ್ದರೂ ಸಹ ಹೊರತುಪಡಿಸಲಾಗಿದೆ. ಸಹಕಾರಿ ಸಂಘಗಳ ಒಟ್ಟು ಸದಸ್ಯತ್ವದ ಶೇಕಡ 30 ಕ್ಕೂ ಹೆಚ್ಚು ಸದಸ್ಯರನ್ನು ಯಶಸ್ವಿನಿ ಯೋಜನೆಯಲ್ಲಿ ಒಳಪಡಿಸಲಾಗಿಲ್ಲ. ಅದೇ ರೀತಿ ರಾಷ್ಟ್ರೀಯ ಸ್ವಾಸ್ಥ ಭೀಮಾ ಯೋಜನೆ ಹಾಗೂ ಆಮ್ ಆದ್ಮಿ ಭಿಮಾ ಯೋಜನೆಗಳು ತನ್ನದೇ ಆದ ರೂಪು ರೇಷೆಗಳನ್ನು ಹೊಂದಿದ್ದು ಬಡತನ ರೇಖೆಗಿಂತ ಕೆಳಗಿರುವ ಎಲ್ಲರನ್ನೂ ಅವುಗಳಡಿ ಒಳಪಡಿಸಲು ಸಾಧ್ಯವಾಗಿಲ್ಲ.

ಏನತ್ಮಧ್ಯೆ, ಆಂಧ್ರ ಪ್ರದೇಶ ಸರ್ಕಾರವು "ಆರೋಗ್ಯಶ್ರೀ" ಎಂಬ ಆರೋಗ್ಯ ವಿಮೆ ಯೋಜನೆಯನ್ನು ಆ ರಾಜ್ಯದಲ್ಲಿ ಬೃಹದಾಕಾರವಾಗಿ ಪ್ರಾರಂಭಿಸಿದೆ. ಈ ಯೋಜನೆಯಡಿ ಒಮ್ಮೆಲೆ ದುರಂತ ಉಂಟು ಮಾಡುವ (catastrophic) ಅನಾರೋಗ್ಯಗಳಿಗೆ ತೃತೀಯ ಹಂತದಲ್ಲಿ (Tertiary level) ಚಿಕಿತ್ಸೆಯನ್ನು ನೀಡಲಾಗುತ್ತಿದೆ. ಆಂಧ್ರ ಪ್ರದೇಶದಲ್ಲಿ ನಾಲ್ಕು ಕೋಟಿ ಜನಸಂಖ್ಯೆಯನ್ನು ಒಳಗೊಂಡಂತೆ ಈ ಯೋಜನೆಯನ್ನು ಜಾರಿಮಾಡಲಾಗಿದೆ. ಭಾರತದಲ್ಲೇ ಇದು ಅತ್ಯಂತ ಹೆಚ್ಚಿನ ಜನಸಂಖ್ಯೆಯನ್ನು ಒಳಗೊಂಡ ಕಾರ್ಯಕ್ರಮವಾಗಿದೆ. ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಮೇಲೆ (1) ರಲ್ಲಿ ಓದಲಾದ ದಿನಾಂಕ: 29/9/2007 ರಂದು ನಡೆದ ಸಭೆಯಲ್ಲಿ ಸುವರ್ಣ ಸುರಕ್ಷಾ ಯೋಜನೆಯನ್ನು ಜಾರಿಗೊಳಿಸುವ ಬಗ್ಗೆ ಚರ್ಚಿಸಲಾಗಿತ್ತು. ಆ ಸಭೆಯಲ್ಲಿ, ಇನ್ನಿತರೆ ಅಂಶಗಳನ್ನು ಒಳಗೊಂಡಂತೆ, ಆಂಧ್ರ ಪ್ರದೇಶದ ಆರೋಗ್ಯಶ್ರೀ ಯೋಜನೆಯನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಅಧ್ಯಯನ ಮಾಡಿ ಅದರಂತೆ ಸುವರ್ಣ ಆರೋಗ್ಯ ಸುರಕ್ಷಾ ಯೋಜನೆಯನ್ನು ನಮ್ಮ ರಾಜ್ಯದಲ್ಲಿ ಜಾರಿಗೊಳಿಸಲು ಒಂದು ವಿವರವಾದ ಪ್ರಸ್ತಾವನೆಯನ್ನು ತಯಾರಿಸುವಂತೆ ತೀರ್ಮಾನಿಸಲಾಯಿತು. ಅದರನ್ವಯ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅಧಿಕಾರಿಗಳ ತಂಡವೊಂದು ಆಂಧ್ರ ಪ್ರದೇಶಕ್ಕೆ ಭೇಟಿ ನೀಡಿ ಆರೋಗ್ಯಶ್ರೀ ಯೋಜನೆಯನ್ನು ಆಧ್ಯಯನ ಮಾಡಿದೆ. ಆಂಧ್ರ ಪ್ರದೇಶದ ಆರೋಗ್ಯಶ್ರೀ ಮಾದರಿಯು ಬಹಳ ಪ್ರಯೋಜನಕಾರಿಯಾಗಿದ್ದು, ಬಡತನ ರೇಖೆಗಿಂತ ಕೆಳಗಿರುವ ಜನರ ಆರೋಗ್ಯ ಸ್ಥಾನಮಾನವನ್ನು ಸುಧಾರಿಸುವ ನಿಟ್ಟಿನಲ್ಲಿ ಖಚಿತವಾಗಿಯೂ ಧೀರ್ಘಕಾಲಿಕ ಪರಿಣಾಮವನ್ನು ಅದು ಬೀರುತ್ತದೆ.

ಕರ್ನಾಟಕ ರಾಜ್ಯದಲ್ಲಿಯೂ ಸಹ ಬಡತನ ರೇಖೆಯ ಕೆಳಗಿರುವ ಕುಟುಂಬಗಳು ತಮ್ಮ ಆದಾಯದ ಮುಖ್ಯ ಪಾಲನ್ನು ಆರೋಗ್ಯ ಸಮಸ್ಯೆಗಳಿಗೆ ಖರ್ಚು ಮಾಡುತ್ತಾರೆ. ಸರ್ಕಾರಿ ವಲಯದಲ್ಲಿ ಪ್ರಾಥಮಿಕ ಹಾಗೂ ದ್ವಿತೀಯ ಹಂತದ ರಕ್ಷಣೆ ಲಭ್ಯವಿದೆ. ಬೆರಳೆಣಿಸುವ ಕೆಲವು ಸರ್ಕಾರಿ ಆಸ್ಪತ್ರೆಗಳನ್ನು ಬಿಟ್ಟರೆ ಇತರೆ ಸರ್ಕಾರಿ ಆಸ್ಪತ್ರೆಗಳಲ್ಲಿ ಸೂಪರ್ ಸ್ಪೆಷಾಲಿಟಿ ಚಿಕಿತ್ಸೆ ಲಭ್ಯವಿರುವುದಿಲ್ಲ. ಮಾರಣಾಂತಿಕ ಖಾಯಿಲೆಗಳು ಬಡತನ ರೇಖೆಯ ಕೆಳಗಿರುವ ಕುಟುಂಬಗಳ ಹತ್ತಾರು ವರ್ಷಗಳ ಉಳಿತಾಯವನ್ನು ಅಳಿಸಿಹಾಕುತ್ತವೆ. ಬಡ ಕುಟುಂಬಗಳು ಮಾರಣಾಂತಿಕ ಖಾಯಿಲೆಗಳನ್ನು ಎದುರಿಸಲು ಸಹಾಯ

ಮಾಡುವುದು ಸರ್ಕಾರದ ನೈತಿಕ ಹೊಣೆಯಾಗಿದೆ. ಈ ಎಲ್ಲಾ ಅಂಶಗಳನ್ನು ಪರಿಗಣಿಸಿ ಈಗ "ಸುವರ್ಣ ಆರೋಗ್ಯ ಸುರಕ್ಷಾ" ಎಂಬ ಒಂದು ವಿವರವಾದ ಆರೋಗ್ಯ ವಿಮಾ ಯೋಜನೆಯನ್ನು ಆಂಧ್ರ ಪ್ರದೇಶದ ಆರೋಗ್ಯಶ್ರೀ ಮಾದರಿಯನ್ವಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ತಯಾರಿಸಿದೆ. ಸುವರ್ಣಾ ಆರೋಗ್ಯ ಸುರಕ್ಷಾ ಯೋಜನೆಯನ್ನು ಜಾರಿಗೆ ತರಲು ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ರೂ. 25.25 ಕೋಟಿಗಳ ಅನುದಾನವನ್ನು ಒದಗಿಸಲಾಗಿದೆ. ಆದುದರಿಂದ, ಈಗ "ಸುವರ್ಣ ಆರೋಗ್ಯ ಸುರಕ್ಷಾ" ಎಂಬ ಒಂದು ಪ್ರಮುಖ ಆರೋಗ್ಯ ವಿಮೆ ಯೋಜನೆಯನ್ನು ಬಡತನ ರೇಖೆಗಿಂತ ಕೆಳಗಿರುವ ಕುಟುಂಬದವರಿಗೆ ಚಿಕಿತ್ಸೆಯನ್ನು ನಗದುರಹಿತವಾಗಿ ನೀಡಲು ಪ್ರಸ್ತಾವನೆಯನ್ನು ತಯಾರಿಸಿ ಸರ್ಕಾರದ ಆದೇಶ ಹೊರಡಿಸಬೇಕೆಂದು ಕೋರಿ ಮೇಲೆ ಓದಲಾದ (2) ರ ಕಡತದಲ್ಲಿ ಯೋಜನಾ ಆಡಳಿತಾಧಿಕಾರಿ, ಕರ್ನಾಟಕ ಆರೋಗ್ಯ ಪದ್ದತಿ ಅಭಿವೃದ್ಧಿ ಸುಧಾರಣೆ ಯೋಜನೆ ರವರು ಪ್ರಸ್ತಾವನೆ ಸಲ್ಲಿಸಿದ್ದಾರೆ.

ದಿನಾಂಕ: 1/11/2008 ರಂದು ಮಾನ್ಯ ಮುಖ್ಯಮಂತ್ರಿಯವರು ಆರೋಗ್ಯ ಕವಚ ಯೋಜನೆಯನ್ನು ಉದ್ಘಾಟನೆ ಮಾಡುವ ಸಂದರ್ಭದಲ್ಲಿ ಸುವರ್ಣ ಆರೋಗ್ಯ ಸುರಕ್ಷಾ ಯೋಜನೆಯನ್ನು ರಾಜ್ಯದ ಗುಲ್ಬರ್ಗಾ ವಿಭಾಗದಲ್ಲಿ ಪ್ರಾಯೋಗಿಕವಾಗಿ ಜಾರಿಗೊಳಿಸಲಾಗುವುದು ಎಂಬುದಾಗಿ ಸಹ ಘೋಷಣೆ ಮಾಡಿದ್ದರು. ಅದರಂತೆ ಗುಲ್ಬರ್ಗಾ ವಿಭಾಗದ ಐದು ಜಿಲ್ಲೆಗಳಲ್ಲಿ ಅಂದರೆ ಬೀದರ್, ಗುಲ್ಬರ್ಗಾ, ರಾಯಚೂರು, ಕೊಪ್ಪಳ, ಮತ್ತು ಬಳ್ಳಾರಿಗಳಲ್ಲಿ ಪ್ರಾಯೋಗಿಕವಾಗಿ ಪ್ರಸಕ್ತ ಸಾಲಿನಿಂದ ಸುವರ್ಣ ಆರೋಗ್ಯ ಸುರಕ್ಷಾ ಯೋಜನೆಯನ್ನು ಜಾರಿಗೊಳಿಸುವ ಪ್ರಸ್ತಾವನೆಯನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ಯೋಜನೆ ಮತ್ತು ಆರ್ಥಿಕ ಇಲಾಖೆಗಳ ಸಮಾಲೋಚನೆಯೊಂದಿಗೆ ಪರಿಶೀಲಿಸಿದೆ. ಈ ಕುರಿತು ವಿಷಯವನ್ನು ಸಚಿವ ಸಂಪುಟದ ಅನುಮೋದನೆಗೆ ಸಹ ಮಂಡಿಸಲಾಗಿ ಸಚಿವ ಸಂಪುಟವು ಮೇಲೆ (3 ರಲ್ಲಿ) ಓದಲಾದ ದಿನಾಂಕ: 18/2/2009 ರಂದು ನಡೆದ ಸಭೆಯಲ್ಲಿ ಪ್ರಸ್ತಾವನೆಗೆ ಅನುಮೋದನೆ ನೀಡಿದೆ.

ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಆಕುಕ 216 ಸಿಜಿಇ 2008, ಬೆಂಗಳೂರು, ದಿನಾಂಕ 20ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಗುಲ್ಬರ್ಗಾ ವಿಭಾಗದ ಐದು ಜಿಲ್ಲೆಗಳಾದ ಬೀದರ್, ಗುಲ್ಬರ್ಗಾ, ರಾಯಚೂರು, ಕೊಪ್ಪಳ ಮತ್ತು ಬಳ್ಳಾರಿ ಗಳಲ್ಲಿ ರಾಜ್ಯದ ಬಡತನ ರೇಖೆಗಿಂತ ಕೆಳಗಿರುವ ಕುಟುಂಬ ವರ್ಗದವರಿಗೆ "ಸುವರ್ಣ ಆರೋಗ್ಯ ಸುರಕ್ಷಾ" ಎಂಬ ಒಂದು ಹೊಸ ಆರೋಗ್ಯ ವಿಮೆ ಯೋಜನೆಯನ್ನು ತಕ್ಷಣದಿಂದಲೇ ಅನ್ವಯವಾಗುವಂತೆ ಜಾರಿಗೊಳಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

2. ಸುವರ್ಣ ಆರೋಗ್ಯ ಸುರಕ್ಷಾ ಯೋಜನೆಯನ್ನು ಜಾರಿಗೊಳಿಸಲು "ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್" ಎಂಬ ಹೆಸರಿನ ಒಂದು ಟ್ರಸ್ಟ್‌ನ್ನು ಭಾರತೀಯ ಟ್ರಸ್ಟ್ ಅಧಿನಿಯಮ 1882 ರಡಿ ಕೆಳಕಂಡಂತೆ ರಚಿಸಿ ಅದರ ಮೂಲಕ ಅನುಷ್ಠಾನಗೊಳಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| | | |
|---|---|---|
| 1. | ಮಾನ್ಯ ಮುಖ್ಯ ಮಂತ್ರಿಗಳು | ಪ್ರಧಾನ ಪೋಷಕರು |
| 2. | ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು | ಪೋಷಕರು–1 |
| 3. | ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು | ಪೋಷಕರು–2 |
| 4. | ಸರ್ಕಾರದ ಕಾರ್ಯದರ್ಶಿ, ಅರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಅಧ್ಯಕ್ಷರು |
| 5. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ, ಅಥವ ಉಪ ಕಾರ್ಯದರ್ಶಿ ದರ್ಜೆಗೆ ಕಡಿಮೆಯಿಲ್ಲದ ಅವರ ಪ್ರತಿನಿಧಿ | ಟ್ರಸ್ಟೀ |
| 6. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಅರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ) | ಟ್ರಸ್ಟೀ |
| 7. | ಸರ್ಕಾರದ ಕಾರ್ಯದರ್ಶಿ, ಸಹಕಾರ ಇಲಾಖೆ | ಟ್ರಸ್ಟೀ |
| 8. | ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ | ಟ್ರಸ್ಟೀ |
| 9. | ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | ಮುಖ್ಯ ಕಾರ್ಯನಿರ್ವಾಹಕ ಟ್ರಸ್ಟೀ |
| 10. | ಅಭಿಯಾನ ನಿರ್ದೇಶಕರು, ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ / ಯೋಜನಾ ನಿರ್ದೇಶಕರು, ಕರ್ನಾಟಕ ಆರೋಗ್ಯ ಪದ್ದತಿ ಅಭಿವೃದ್ಧಿ ಸುಧಾರಣೆ | ಟ್ರಸ್ಟೀ |
| 11. | ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಟ್ರಸ್ಟೀ |
| 12. | ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇಲಾಖೆ | ಟ್ರಸ್ಟೀ |
| 13. | ಡಾ. ದೇವಿ ಶೆಟ್ಟಿ, ಕಾರ್ಡಿಯೋ ಥೋರಾಸಿಕ್ ಸರ್ಜನ್, ನಾರಾಯಣ ಹೃದಯಾಲಯ, ಬೆಂಗಳೂರು | ಟ್ರಸ್ಟೀ |
| 14. | ಟಸ್ಟ್ ನ ಕಾರ್ಯ–ನಿರ್ವಾಹಕ ನಿರ್ದೇಶಕರು | ಟ್ರಸ್ಟೀ–ಕಾರ್ಯದರ್ಶಿ |

| | | |
|---|---|---|
| 15. | ಡಾ.ಸಿ.ಎನ್. ಮಂಜುನಾಥ್, ನಿರ್ದೇಶಕರು, ಜಯದೇವ ಹೃದ್ರೋಗ ಸಂಸ್ಥೆ, ಬೆಂಗಳೂರು | ಟ್ರಸ್ಟೀ |
| 16. | ಡಾ. ಡಿ. ನಾಗರಾಜ್, ನಿರ್ದೇಶಕರು, ನಿಮ್ಹಾನ್ಸ್, ಬೆಂಗಳೂರು | ಟ್ರಸ್ಟೀ |
| 17. | ಶ್ರೀ ಮೋಹನ್ ದಾಸ್ ಪೈ, ಇನ್ಫೋಸಿಸ್ ಸಂಸ್ಥೆ, ಬೆಂಗಳೂರು | ಟ್ರಸ್ಟೀ |
| 18. | ಡಾ.ಕೆ.ವಿ.ರಾಜು, ಅರ್ಥಶಾಸ್ತ್ರಜ್ಞರು, ಬೆಂಗಳೂರು | ಟ್ರಸ್ಟೀ |
| 19. | ಡಾ. ಹೆಚ್. ಸುದರ್ಶನ್, ಕರುಣಾ ಟ್ರಸ್ಟ್ | ಟ್ರಸ್ಟೀ |
| 20. | ಡಾ. ಅಶೋಕ್ ಶೆಣೈ, ನಿರ್ದೇಶಕರು, ಕಿದ್ವಾಯ ಕ್ಯಾನ್ಸರ್ ಸಂಸ್ಥೆ, ಬೆಂಗಳೂರು | ಟ್ರಸ್ಟೀ |

ಸದರಿ ಟ್ರಸ್ಟ್ ಆರೋಗ್ಯ, ವಿಮೆ, ಆರ್ಥಿಕ, ರಿಸ್ಕ್ ನಿರ್ವಹಣೆ ಇತ್ಯಾದಿ ಕ್ಷೇತ್ರದಲ್ಲಿರುವ ಪ್ರಮುಖ ವ್ಯಕ್ತಿಗಳನ್ನು ಆಗಿಂದಾಗ್ಗೆ ಆಹ್ವಾನಿಸಬಹುದು. ಅಂತಹ ಆಹ್ವಾನಿತರ ಸಂಖ್ಯೆ ಒಂದು ಸಲಕ್ಕೆ ಐದನ್ನು ಮೀರಬಾರದು.

3. ಸುವರ್ಣ ಆರೋಗ್ಯ ಸುರಕ್ಷಾ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಅಗತ್ಯವಾದ ನೀತಿ ನಿರ್ಣಯಗಳಿಗೆ ಸಂಬಂಧಿಸಿದ ಎಲ್ಲಾ ತೀರ್ಮಾನಗಳನ್ನು ತೆಗೆದುಕೊಳ್ಳಲು ಸದರಿ ಟ್ರಸ್ಟ್ ಅಧಿಕಾರ ಹೊಂದಿರುತ್ತದೆ ಹಾಗೂ ಸದರಿ ಟ್ರಸ್ಟ್ ಈ ಯೋಜನೆಯ ಒಟ್ಟಾರೆ ಮೇಲ್ವಿಚಾರಣೆ, ನಿಯಂತ್ರಣ ಮತ್ತು ಆಡಳಿತ ಅಧಿಕಾರ ಸಹ ಹೊಂದಿರುತ್ತದೆ. ಸದರಿ ಟ್ರಸ್ಟ್‌ನ ಅಧಿಕಾರ ಮತ್ತು ಜವಾಬ್ದಾರಿ ಈ ದೆಸೆಯಲ್ಲಿ ಪ್ರತ್ಯೇಕವಾಗಿ ನೊಂದಾಯಿಸಲ್ಪಡುವ ಟ್ರಸ್ಟ್ ಡೀಡ್ ನಲ್ಲಿ ನಮೂದಿಸಿರುವ ಪ್ರಕಾರ ಇರತಕ್ಕದ್ದು.

4. ಈ ಯೋಜನೆಯ ದಿನನಿತ್ಯದ ಕಾರ್ಯ ನಿರ್ವಹಣೆಗಾಗಿ ಕೆಳಕಂಡ ಕಾರ್ಯಕಾರಿ ಸಮಿತಿಯನ್ನು ಸಹ ರಚಿಸಲಾಗಿದೆ:–

| | | |
|---|---|---|
| 1. | ಸರ್ಕಾರದ ಕಾರ್ಯದರ್ಶಿ,<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಅಧ್ಯಕ್ಷರು |
| 2. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ, ಅಥವ ಉಪ ಕಾರ್ಯದರ್ಶಿ ದರ್ಜೆಗೆ ಕಡಿಮೆಯಿಲ್ಲದ ಅವರ ಪ್ರತಿನಿಧಿ | ಸದಸ್ಯರು |
| 3. | ಸರ್ಕಾರದ ಪ್ರಧಾನ ಕಾರ್ಯದರ್ಶಿ,<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ) | ಸದಸ್ಯರು |
| 4. | ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | ಸದಸ್ಯರು |
| 5. | ಅಭಿಯಾನ ನಿರ್ದೇಶಕರು, ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ / ಯೋಜನಾ ನಿರ್ದೇಶಕರು, ಕರ್ನಾಟಕ ಆರೋಗ್ಯ ಪದ್ಧತಿ ಅಭಿವೃದ್ಧಿ ಸುಧಾರಣೆ | ಸದಸ್ಯರು |
| 6. | ಟ್ರಸ್ಟ್ ನ ಕಾರ್ಯ–ನಿರ್ವಾಹಕ ನಿರ್ದೇಶಕರು | ಸದಸ್ಯ–ಕಾರ್ಯದರ್ಶಿ |
| 7. | ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸದಸ್ಯರು |
| 8. | ಡಾ. ಹೆಚ್. ಸುದರ್ಶನ್, ಕರುಣಾ ಟ್ರಸ್ಟ್, | ಸದಸ್ಯರು |
| 9. | ಡಾ. ಕೆ.ವಿ. ರಾಜು, ಅರ್ಥಶಾಸ್ತ್ರಜ್ಞರು, ಬೆಂಗಳೂರು | ಸದಸ್ಯರು |
| 10. | ಶ್ರೀ ಮೋಹನ್ ದಾಸ್ ಪೈ, ಇನ್ಫೋಸಿಸ್ | ಸದಸ್ಯರು |

5. ಕಾರ್ಯಕಾರಿ ಸಮಿತಿಯ ಅಧಿಕಾರ ಮತ್ತು ಜವಾಬ್ದಾರಿ ಕೆಳಕಂಡಂತಿರುತ್ತದೆ.

(1) ಸುವರ್ಣ ಆರೋಗ್ಯ ಸುರಕ್ಷಾ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಒಂದು ಅನುಷ್ಠಾನ ಏಜೆನ್ಸಿಯನ್ನು (Implementing Agency) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ ಮತ್ತು ಅದರಡಿ ರಚಿಸಲಾದ ನಿಯಮಗಳನ್ನು ಅನುಸರಿಸಿ ಆಯ್ಕೆ ಮಾಡುವುದು.

(2) ಅನುಷ್ಠಾನ ಏಜೆನ್ಸಿಯು ನಿರ್ವಹಿಸುವ ಕಾರ್ಯ ಮತ್ತು ಜವಾಬ್ದಾರಿಯನ್ನು ನಿಗದಿಪಡಿಸಿ ಅದರ ಜೊತೆ ಹಾಗೂ ಜಾಲ ಆಸ್ಪತ್ರೆಗಳ (Network Hospitals) ಜೊತೆ ಸೂಕ್ತ ಒಪ್ಪಂದ ಮಾಡಿಕೊಳ್ಳುವುದು. ಒಟ್ಟಾರೆಯಾಗಿ ಈ ಯೋಜನೆಯನ್ನು ಜಾರಿಗೊಳಿಸಲು ದಿನನಿತ್ಯದ ಆಡಳಿತಕ್ಕೆ ಬೇಕಾದ ಎಲ್ಲಾ ನಿರ್ಣಯಗಳನ್ನು ತೆಗೆದುಕೊಳ್ಳಲು ಕಾರ್ಯಕಾರಿ ಸಮಿತಿಗೆ ಪೂರ್ಣ ಅಧಿಕಾರವಿರುತ್ತದೆ.

(3) ಸದರಿ ಕಾರ್ಯಕಾರಿ ಸಮಿತಿಯ ವಿವರವಾದ ಅಧಿಕಾರ ಮತ್ತು ಜವಾಬ್ದಾರಿ ಈ ದೆಸೆಯಲ್ಲಿ ಪ್ರತ್ಯೇಕವಾಗಿ ನೊಂದಾಯಿಸಲ್ಪಡುವ ಟ್ರಸ್ಟ್ ಡೀಡ್ ನಲ್ಲಿ ನಮೂದಿಸಿರುವ ಪ್ರಕಾರ ಇರತಕ್ಕದ್ದು.

6. ಸುವರ್ಣ ಆರೋಗ್ಯ ಸುರಕ್ಷಾ ಯೋಜನೆಯ ರೂಪುರೇಷೆಗಳು ಕೆಳಕಂಡಂತೆ ಇರತಕ್ಕದ್ದು:–

(1) ಸುವರ್ಣ ಆರೋಗ್ಯ ಸುರಕ್ಷಾ ಯೋಜನೆಯಡಿಯಲ್ಲಿ ಈ ಕೆಳಕಂಡ ಮಾರಣಾಂತಿಕ ಖಾಯಿಲೆಗಳಿಗೆ ಆಸ್ಪತ್ರೆಗೆ ದಾಖಲಾತಿ, ಶಸ್ತ್ರಚಿಕಿತ್ಸೆ ಹಾಗೂ ಇತರೆ ಚಿಕಿತ್ಸೆಗಳನ್ನು ಗೊತ್ತುಪಡಿಸಿದ ಆರೋಗ್ಯ ಸಂಸ್ಥೆಗಳ ಜಾಲದ ಮೂಲಕ ನೀಡಲಾಗುವುದು.

- ಹೃದ್ರೋಗಗಳು
- ಕ್ಯಾನ್ಸರ್ ಚಿಕಿತ್ಸೆ – ಶಸ್ತ್ರಚಿಕಿತ್ಸೆ / ಕೀಮೋಥೇರಪಿ
- ನರವ್ಯಾಧಿಗಳು
- ಕಿಡ್ನಿ ಖಾಯಿಲೆಗಳು.
- ಸುಟ್ಟ ಪ್ರಕರಣ
- ಬಹು ಅಪಘಾತ ಪ್ರಕರಣಗಳು (ಪಾಲಿಟ್ರಾಮ) (ವಾಹನ ವಿಮೆ ಪ್ರಕರಣಗಳ ಹೊರತಾಗಿ),
- ನಿಯೋನ್ಯಾಟಲ್
- ಈ ಯೋಜನೆಯಡಿ ಒಳಪಡಿಸಲಾಗುವ ಇತರೆ ಚಿಕಿತ್ಸೆ ವಿವರಗಳ ಪಟ್ಟಿಯನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

(2) **ಆಸ್ಪತ್ರೆಗಳ ಜಾಲ:** ಕಾರ್ಯಕಾರಿ ಸಮಿತಿ ಗುರುತಿಸಲ್ಪಟ್ಟ ಆಸ್ಪತ್ರೆಗಳ ಜಾಲದ ಮುಖಾಂತರ ಆರೋಗ್ಯ ಚಿಕಿತ್ಸೆ ನೀಡಲಾಗುವುದು. ಐ.ಆರ್.ಡಿ.ಎ. ನೊಂದಣಿವುಳ್ಳ ಅನುಷ್ಠಾನ ಏಜೆನ್ಸಿ ಈ ಯೋಜನೆಯನ್ನು ಕಾರ್ಯಕಾರಿ ಸಮಿತಿ ನಿಗದಿಪಡಿಸಿದ ಜವಾಬ್ದಾರಿ ರೀತಿ ಕಾರ್ಯಗತ ಮಾಡುವ ಜವಾಬ್ದಾರಿ ಹೊಂದಿರುತ್ತದೆ. ಈ ಬಗ್ಗೆ ಒಂದು ಒಪ್ಪಂದವನ್ನು ಆಸ್ಪತ್ರೆಗಳ ಜೊತೆ ಮಾಡಿಕೊಳ್ಳಲಾಗುವುದು. ಸದರಿ ಒಪ್ಪಂದಕ್ಕೆ ಸುವರ್ಣ ಆರೋಗ್ಯ ಸುರಕ್ಷಾ ಕಾರ್ಯಕಾರಿ ಸಮಿತಿ ಅನುಮೋದನೆ ನೀಡುತ್ತದೆ. ಆ ಒಪ್ಪಂದದಲ್ಲಿ ಕರಾರು ಉಲಂಘನೆಗೆ ದಂಡ ಇತ್ಯಾದಿ ಉಪಬಂಧಗಳನ್ನು ಕಲ್ಪಿಸಲಾಗುವುದು.

(3) **ವ್ಯಾಪ್ತಿ:** ಬಡತನ ರೇಖೆಗಿಂತ ಕೆಳಗಿರುವ ಪ್ರತಿ ಕುಟುಂಬದ ಐವರು ಗರಿಷ್ಠ ಸದಸ್ಯರುಗಳಿಗೆ ಅಂದರೆ ಪತಿ, ಪತ್ನಿ, ಇಬ್ಬರು ಅಥವಾ ಮೂವರು ಅವಲಂಭಿತರುಗಳಿಗೆ ಸೀಮಿತಗೊಳಿಸಿದೆ. ಪ್ರಾರಂಭಿಕವಾಗಿ ಈ ಯೋಜನೆಯನ್ನು ಗುಲ್ಬರ್ಗಾ ವಿಭಾಗದಲ್ಲಿನ ಜಿಲ್ಲೆಗಳು ಅಂದರೆ ಬೀದರ್, ಗುಲ್ಬರ್ಗಾ, ರಾಯಚೂರು, ಕೊಪ್ಪಳ ಮತ್ತು ಬಳ್ಳಾರಿಗಳಲ್ಲಿ ಜಾರಿಗೊಳಿಸಲಾಗುವುದು. ತದನಂತರ ಹಂತಹಂತವಾಗಿ ರಾಜ್ಯಾದ್ಯಾಂತ ವಿಸ್ತರಿಸಲಾಗುವುದು.

(4) **ಫಲಾನುಭವಿಗಳ ಗುರುತಿಸುವಿಕೆ:** ಕರ್ನಾಟಕ ಸರ್ಕಾರದ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯಿಂದ ಬಡತನ ರೇಖೆಗಿಂತ ಕೆಳಗಿರುವ ಕುಟುಂಬ ವರ್ಗದವರು ಬಿ.ಪಿ.ಎಲ್ ಕಾರ್ಡ್ ಹೊಂದಿರುವಂತಹವರು ಈ ಯೋಜನೆಯಡಿ ಲಾಭ ಪಡೆಯಲು ಅರ್ಹತೆಯುಳ್ಳವರಾಗಿರುತ್ತಾರೆ. ಸದರಿ ಬಿ.ಪಿ.ಎಲ್ ಕಾರ್ಡಿನಲ್ಲಿ ನಮೂದಿಸಿರುವ ಹೆಸರು / ಭಾವಚಿತ್ರದ ಪ್ರಕಾರ ಪ್ರತಿ ಕುಟುಂಬಕ್ಕೆ ಗರಿಷ್ಠ ಐದು ಜನರು ಈ ಯೋಜನೆಯ ಲಾಭವನ್ನು family floater ಆಧಾರದ ಮೇಲೆ ಪಡೆಯಬಹುದು. ಕಾಲಕ್ರಮೇಣದಲ್ಲಿ ಫಲಾನುಭವಿಗಳಿಗೆ ಈ ಯೋಜನೆಯಡಿ ಬಯೋ–ಮೆಟ್ರಿಕ್ ಕಾರ್ಡ್‌ಗಳನ್ನು ನೀಡಲಾಗುವುದು.

(5) **ವಿಮೆ ವಂತಿಕೆ ಮತ್ತು ವಿಮೆಯ ಅವಧಿ:** ಪ್ರತಿ ಕುಟುಂಬ ಐದು ಸದಸ್ಯರಿಗೆ ಪ್ರತಿ ವರ್ಷಕ್ಕೆ ಅಂದಾಜು ರೂ. 300 ರಂತೆ ಫಲಾನುಭವಿಗಳ ವಂತಿಕೆಯಾಗಿ ಸರ್ಕಾರವು ಆರೋಗ್ಯ ಸುವರ್ಣ ಸುರಕ್ಷಾ ಯೋಜನೆಯನ್ನು ಅನುಷ್ಠಾನಗೊಳಿಸುವ ಟ್ರಸ್ಟ್‌ಗೆ ಎರಡು ಕಂತುಗಳಲ್ಲಿ ನೇರವಾಗಿ ಪಾವತಿಸಲಿದೆ. ಫಲಾನುಭವಿಗಳು ಯಾವುದೇ ವಂತಿಕೆ ಹಣವನ್ನು ನೀಡಬೇಕಾಗಿಲ್ಲ. ಈ ಯೋಜನೆಯಡಿ ನೀಡಲಾಗುವ ವಿಮೆ ಪಾಲಿಸಿಯು ವಿಮೆ ಪಾಲಿಸಿಯನ್ನು ನೀಡಿದ ದಿನಾಂಕದಿಂದ ಒಂದು ವರ್ಷದ ಅವಧಿಯವರೆಗೆ ಜಾರಿಯಲ್ಲಿರುತ್ತದೆ.

(6) **ವಿಮೆ ಲಾಭದ ಗಂಟು (ಬೆನಿಫಿಟ್ ಪ್ಯಾಕೇಜ್):** ವಿಮೆ ಲಾಭದ ಗಂಟು ತೃತೀಯ ಹಂತದ ಈ ಯೋಜನೆಯಡಿ ಗುರುತಿಸಲ್ಪಟ್ಟ ಮಾರಣಾಂತಿಕ ಕಾಯಿಲೆಗಳ ಚಿಕಿತ್ಸೆಯನ್ನು ಪಡೆಯಲು ಒಳಗೊಂಡಿರುತ್ತದೆ. ವಾಗ್ದಾನದ ವಿಮೆ ಮೊತ್ತ ಕುಟುಂಬವೊಂದಕ್ಕೆ ವಾರ್ಷಿಕ ಗರಿಷ್ಠ ರೂ.1,50,000/–ರಂತೆ (ಫ್ಯಾಮಿಲಿ ಪ್ಲೋಟರ್ ಆಧಾರದ ಮೇಲೆ) ನಿಗಧಿಪಡಿಸಲಾಗಿದೆ. ಸದರಿ ಗರಿಷ್ಠ ಮೊತ್ತ ಮೀರಿದಲ್ಲಿ ಪ್ರತಿ ವರ್ಷ ರೂ.50,000/– ರಂತೆ ಹೆಚ್ಚುವರಿ ವಿಮೆ ಮೊತ್ತವನ್ನು ಒದಗಿಸಲಾಗುವುದು ಹಾಗೂ ಇದು ಇಡೀ ಕುಟುಂಬಕ್ಕೆ ಪ್ರಕರಣದಿಂದ ಪ್ರಕರಣಕ್ಕೆ ಅವಲಂಬಿತವಾಗಿದೆ.

(7) **ಫ್ಲೋಟರ್ ಆಧಾರದ ಮೇಲೆ ವಿಮೆ ಮೊತ್ತ:** ಈ ಯೋಜನೆಯಡಿ, ಆಸ್ಪತ್ರೆ ದಾಖಲಾತಿ, ವೈದ್ಯಕೀಯ, ಶಸ್ತ್ರಚಿಕಿತ್ಸಾ ಪ್ರೊಸಿಜರ್‌ಗಳು ಮತ್ತು ಕೀಮೋಥೆರಪಿ ಪ್ರೊಸಿಜರ್‌ಗಳಿಗೆ ತಗಲುವ ವೆಚ್ಚಕ್ಕೆ ಚಿಕಿತ್ಸೆಯನ್ನು ಫಲಾನುಭವಿಯು ಪಡೆಯಬಹುದಾಗಿದೆ. ಫಲಾನುಭವಿಯ ಕುಟುಂಬವೊಂದಕ್ಕೆ ವಾರ್ಷಿಕ ಗರಿಷ್ಠ ರೂ.1,50,000/–ರಂತೆ (ಫ್ಯಾಮಿಲಿ ಪ್ಲೋಟರ್ ಆಧಾರದ ಮೇಲೆ) ಹಾಗೂ ಸದರಿ ಗರಿಷ್ಠ ಮೊತ್ತವು ಮೀರಿದಲ್ಲಿ ಪ್ರತಿ ವರ್ಷ ರೂ.50,000/– ರಂತೆ ಹೆಚ್ಚುವರಿ ಮೊತ್ತಕ್ಕೆ ಸಮನಾಗಿ (ಅಂದರೆ ಇಡೀ ಕುಟುಂಬಕ್ಕೆ

ಪ್ರಕರಣದಿಂದ ಪ್ರಕರಣಕ್ಕೆ ಅವಲಂಭಿಸಿದೆ) ಜಾಲದ ಆಸ್ಪತ್ರೆ ಮೂಲಕ ಚಿಕಿತ್ಸೆ ಪಡೆಯಬಹುದಾಗಿದೆ. ಫ್ಯಾಮಿಲಿ ಫ್ಲೋಟರ್ ಆಧಾರದ ಮೇಲೆ ದೊರಕುವ ಸದರಿ ಸೌಲಭ್ಯವನ್ನು ಅಂದರೆ ಒಟ್ಟಾರೆ ರೂ.1,50,000/– ಮೊತ್ತಕ್ಕೆ ಸಮನಾಗಿ ಕುಟುಂಬದ ಒಬ್ಬ ಸದಸ್ಯ ಅಥವಾ ಕುಟುಂಬದ ಸದಸ್ಯರು ಒಟ್ಟಾರೆಯಾಗಿ ಉಪಯೋಗಿಸಿಕೊಳ್ಳಬಹುದಾಗಿದೆ.

(8) **ನಗದು ರಹಿತ ವ್ಯವಹಾರ:** ಈ ಯೋಜನೆಯಡಿ ಆಸ್ಪತ್ರೆಯಲ್ಲಿ ದಾಖಲಾಗುವ ರೋಗಿಯ ಚಿಕಿತ್ಸೆಗೆ ಸಂಬಂಧಪಟ್ಟಂತೆ ವ್ಯವಹಾರವು ಸಂಪೂರ್ಣವಾಗಿ ನಗದುರಹಿತವಾಗಿರುತ್ತದೆ. ಅಂದರೆ ಒಬ್ಬ ಫಲಾನುಭವಿಯು ಗುರುತಿಸಲ್ಪಟ್ಟ ಜಾಲದ ಆಸ್ಪತ್ರೆಗೆ ಚಿಕಿತ್ಸೆಗಾಗಿ ದಾಖಲಾಗಿ ಸೇರಿದಂದಿನಿಂದ ಚಿಕಿತ್ಸೆ ಪಡೆದು ಹೊರ ಬರುವ ತನಕವು ಯಾವುದೇ ಹಣವನ್ನು ಪಾವತಿಸಬೇಕಾಗಿಲ್ಲ.

(9) **ಪಾಲಿಸಿ ಪೂರ್ವ ಇದ್ದಂತಹ ಖಾಯಿಲೆಗಳ ಕುರಿತು:** ಒಬ್ಬ ಪಾಲಿಸಿದಾರನು ಯಾವುದೇ ಗುರುತಿಸಲ್ಪಟ್ಟ ಖಾಯಿಲೆಯಿಂದ ಪಾಲಿಸಿ ಪಡೆಯು ಪೂರ್ವ–ನಿಗದಿತವಾಗಿ ನರಳುತ್ತಿದ್ದಲ್ಲಿ ಆ ಖಾಯಿಲೆಗಳಿಗೂ ಸಹ ಈ ಯೋಜನೆಯು ಅನ್ವಯಿಸುತ್ತದೆ.

(10) **ಆಸ್ಪತ್ರೆಗೆ ದಾಖಲಾದ ಮತ್ತು ನಂತರದ ಚಿಕಿತ್ಸಾ ಅವಧಿ:** ಫಲಾನುಭವಿಯು ಚಿಕಿತ್ಸೆಗಾಗಿ ಆಸ್ಪತ್ರೆಗೆ ದಾಖಲಾದ ದಿನಾಂಕದಿಂದ ಹಾಗೂ ಆಸ್ಪತ್ರೆಯಿಂದ ಬಿಡುಗಡೆಯಾದ ಹತ್ತು ದಿನಗಳೊಳಗೆ ಯಾವುದೇ ಚಿಕಿತ್ಸಾ ನಂತರದ ತೊಂದರೆಗೊಳಗಾದಲ್ಲಿ ನಗದುರಹಿತವಾಗಿ ಈ ಯೋಜನೆಯಡಿ ಒದಗಿಸಿರುವ ಪ್ಯಾಕೇಜಿನ ಅನ್ವಯ ಪೂರ್ಣ ಮೊಬಲಿಗೆ ಚಿಕಿತ್ಸೆಯನ್ನು ಪಡೆಯಲು ಅರ್ಹರಿರುತ್ತಾನೆ.

(11) **ಈ ಯೋಜನೆಯಡಿ ಆಸ್ಪತ್ರೆಗಳನ್ನು ನೊಂದಾಯಿಸುವುದು:** ಎಲ್ಲಾ ಸಾರ್ವಜನಿಕ ಆಸ್ಪತ್ರೆಗಳು (ಜಿಲ್ಲಾ ಆಸ್ಪತ್ರೆಗಳು, ಸರ್ಕಾರಿ / ಖಾಸಗಿ ವೈದ್ಯಕೀಯ ಕಾಲೇಜುಗಳು) ಮತ್ತು ಗುರುತಿಸಲ್ಪಟ್ಟ ಖಾಸಗಿ ಆಸ್ಪತ್ರೆಗಳು / ನರ್ಸಿಂಗ್ ಹೋಂಗಳನ್ನು ಪ್ರತ್ಯೇಕವಾಗಿ ಈ ಯೋಜನೆಯಡಿ ಸುವರ್ಣ ಆರೋಗ್ಯ ಸುರಕ್ಷಾ ಕಾರ್ಯಕಾರಿ ಸಮಿತಿ ಪಟ್ಟಿ ಮಾಡುವುದು. ಖಾಸಗಿ ಆಸ್ಪತ್ರೆಗಳು ಮತ್ತು ನರ್ಸಿಂಗ್ ಹೋಂಗಳು ಎಂದರೆ ಕನಿಷ್ಠ ಮಾನದಂಡಗಳನ್ನು ಹೊಂದಿರುವಂತಹ ಕರ್ನಾಟಕದಲ್ಲಿ ಒಳರೋಗಿ ಶಸ್ತ್ರಚಿಕಿತ್ಸೆಗಾಗಿ ಸ್ಥಾಪಿಸಲ್ಪಟ್ಟ ಯಾವುದೇ ಸಂಸ್ಥೆ ಮತ್ತು ಜಾಲದ ಆಸ್ಪತ್ರೆ ಆಗಿರುತ್ತದೆ. ಸೂಪರ್ ಸ್ಪೆಷಾಲಿಟಿ ಚಿಕಿತ್ಸೆಗಳಾದ ನರರೋಗ, ಹೃದಯ, ಕ್ಯಾನ್ಸರ್ (ಶಸ್ತ್ರಚಿಕಿತ್ಸೆ, ಕಿಮೋಥೆರಪಿ, ರೇಡಿಯೋಥೆರಪಿ), ಮೂತ್ರಪಿಂಡ ತೊಂದರೆ, ಸುಟ್ಟ ಗಾಯಗಳು ಮತ್ತು ಮೋಟಾರು ವಾಹನ ಅಧಿನಿಯಮದಡಿ ಒಳಗೊಳ್ಳದ ಪಾಲಿ–ಟ್ರಾಮ, ಚಿಕಿತ್ಸೆ ನೀಡಲು ಆಸ್ಪತ್ರೆಗಳು ನಿಗದಿತ ಮೂಲಸೌಲಭ್ಯ ಹಾಗೂ ತಜ್ಞ ವೈದ್ಯರನ್ನು ಹೊಂದಿರಬೇಕು ಹಾಗೂ ಸದರಿ ಆಸ್ಪತ್ರೆಗಳು ಬಡತನ ರೇಖೆಗಿಂತ ಕೆಳಗಿರುವ ಫಲಾನುಭವಿಗಳಿಗೆ ಈ ಯೋಜನೆಯಡಿ ನಿಗದಿಪಡಿಸಿರುವ ಸೌಲಭ್ಯಗಳನ್ನು ಒದಗಿಸುವಂತಿರಬೇಕು.

(12) **ಯೋಜನೆ ಜಾರಿಗೊಳಿಸುವ ಏಜೆನ್ಸಿಗಳ ಜೊತೆ ಒಪ್ಪಂದ:** ಆರೋಗ್ಯ ಸುವರ್ಣ ಆರೋಗ್ಯ ಸುರಕ್ಷಾ ಕಾರ್ಯಕಾರಿ ಸಮಿತಿ ಆರೋಗ್ಯ ವಿಮೆ ಯೋಜನೆಯನ್ನು ಜಾರಿಗೊಳಿಸಲು ಒಂದು ಅನುಷ್ಠಾನ ಏಜೆನ್ಸಿ ಜೊತೆ ಒಪ್ಪಂದ ಮಾಡಿಕೊಳ್ಳುತ್ತದೆ. ಸದರಿ ಏಜೆನ್ಸಿಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ ಮತ್ತು ಅದರಡಿ ರಚಿಸಲಾಗಿರುವ ನಿಯಮಗಳನ್ನು ಅನುಸರಿಸಿ ಸುವರ್ಣ ಆರೋಗ್ಯ ಸುರಕ್ಷಾ ಕಾರ್ಯಕಾರಿ ಸಮಿತಿ ಆಯ್ಕೆ ಮಾಡುತ್ತದೆ ಹಾಗೂ ಆ ಏಜೆನ್ಸಿ ಐ.ಆರ್.ಡಿ.ಎ. ನೊಂದಣಿ ಹೊಂದಿರುವುದು ಅವಶ್ಯಕ. ಈ ಏಜೆನ್ಸಿ ಜೊತೆ ನಿರ್ಧಿಷ್ಟವಾಗಿ ಒಪ್ಪಂದ ಮಾಡಿಕೊಳ್ಳುವಂತಹ ಚಟುವಟಿಕೆಗಳು ಅಂದರೆ, ಮಾಹಿತಿ, ಶಿಕ್ಷಣ ಮತ್ತು ಸಂಪರ್ಕ ಚಟುವಟಿಕೆಗಳು, ಆಸ್ಪತ್ರೆಗಳ ಜಾಲ ಮತ್ತು ಸೇವೆ ಒದಗಿಸುವವರನ್ನು ಗುರುತಿಸುವುದು, ಹಣ ಪಾವತಿಸುವಿಕೆ ಕುರಿತ ರೂಪುರೇಷೆಗಳ ತಯಾರಿಕೆ, ಆರೋಗ್ಯ ಮಿತ್ರದಲ್ಲಿರುವಂತೆ ರೋಗಿಗಳ ನೆರವಿಗಾಗಿ ವಿಮೆ, ಸಮನ್ವಯಾಧಿಕಾರಿಗಳ ತರಬೇತಿ ಮತ್ತು ಸ್ಥಳನಿಯುಕ್ತಿ, ಆರೋಗ್ಯ ಮೇಳಗಳನ್ನು ನಡೆಸುವುದು, ಕಾಲ್ ಸೆಂಟರ್‌ಗಳ ಸ್ಥಾಪನೆ ಮತ್ತು ಸ್ವೀಕೃತ ಕ್ಲೈಮ್‌ಗಳ ಪಾವತಿ ಕುರಿತಂತೆ ನಿರ್ವಹಣೆ ಹಾಗೂ ಸೇವೆ ನೀಡುವವರ ಮೇಲ್ವಿಚಾರಣೆ ಇತ್ಯಾದಿ ಒಳಗೊಂಡಿರುತ್ತದೆ. ಸದರಿ ಅನುಷ್ಠಾನ ಏಜೆನ್ಸಿ ನಿರ್ವಹಿಸಬೇಕಾದ ವಿವರಗಳನ್ನು ಒಪ್ಪಂದದಲ್ಲಿ ನಮೂದಿಸಲಾಗುವುದು. ಆದರೆ, ಫಲಾನುಭವಿಗಳ ನೊಂದಣಿ ಮತ್ತು ವಿಮೆ ಮಾರ್ಪಾಡು (Insurance underwriting) ಈ ಚಟುವಟಿಕೆಗಳನ್ನು ಸುವರ್ಣ ಆರೋಗ್ಯ ಸುರಕ್ಷಾ ಕಾರ್ಯಕಾರಿ ಸಮಿತಿ ನಿರ್ವಹಿಸುತ್ತದೆ ಹಾಗೂ ಈ ಕಾರ್ಯವನ್ನು ಯಾವುದೇ ಕಾರಣಕ್ಕೂ ಅನುಷ್ಠಾನ ಏಜೆನ್ಸಿ ನಿರ್ವಹಿಸುವಂತಿಲ್ಲ. ಅನುಷ್ಠಾನ ಏಜೆನ್ಸಿ ಕುರಿತ ಒಪ್ಪಂದವನ್ನು ಆರ್ಥಿಕ ಇಲಾಖೆಯ ಸಮಾಲೋಚನೆಯೊಡನೆ ಅಂತಿಮಗೊಳಿಸಲಾಗುವುದು.

(13) **ಕ್ಲೈಮುಗಳ ಇತ್ಯರ್ಥಪಡಿಸುವಿಕೆ:** ಆಸ್ಪತ್ರೆಗಳ ಕ್ಲೈಮುಗಳನ್ನು ಅನುಷ್ಠಾನ ಏಜೆನ್ಸಿಯು ಪರಿಶೀಲಿಸಿ ಸಲ್ಲಿಸಿದ ನಂತರ ಸುವರ್ಣ ಆರೋಗ್ಯ ಸುರಕ್ಷಾ ಕಾರ್ಯಕಾರಿ ಸಮಿತಿಯು ಸಮೀಕ್ಷಿಸಿ ಏಳು ದಿನಗಳ ಒಳಗೆ ಇತ್ಯಥಪಡಿಸಲಿದೆ.

(14) **ಆರೋಗ್ಯ ಮೇಳಗಳು:** ಎಲ್ಲಾ ಜಿಲ್ಲಾ ಮತ್ತು ತಾಲ್ಲೂಕುಗಳಲ್ಲಿ ಜಾಲ ಆಸ್ಪತ್ರೆಗಳು ಕನಿಷ್ಟ ನಿಗದಿತ ಸಂಖ್ಯೆಯ ಆರೋಗ್ಯ ಮೇಳಗಳನ್ನು ಪ್ರತಿ ಥ್ವರ್ಷ ನಡೆಸಲೇಬೇಕು. ಕಾರ್ಯಕಾರಿ ಸಮಿತಿ ಸಲಹೆ ಮಾಡುವಂತೆ ನಿಗದಿತ ಸ್ಥಳಗಳಲ್ಲಿ, ನಿಯತಕಾಲಿಕೆಯಲ್ಲಿ, ಹಾಗೂ ಅವಶ್ಯಕ ಸಲಕರಕಣೆಗಳು, ತಜ್ಞರು ಮತ್ತು ಅರೆ ವೈದ್ಯಕೀಯ ಸಿಬ್ಬಂದಿಯೊಂದಿಗೆ ಜಾಲ ಆಸ್ಪತ್ರಗಳು ಆರೋಗ್ಯ ಮೇಳಗಳನ್ನು ನಡೆಸುವುದು. ಅವರುಗಳು ಜಿಲ್ಲಾ ಸಮನ್ವಯಾಧಿಕಾರಿ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳ ಜೊತೆ ಸಮನ್ವಯ ಮಾಡಿ ಹಾಗೂ ಜಿಲ್ಲಾ ಜಿಲ್ಲಾಧಿಕಾರಳನ್ನು ಮತ್ತು ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳನ್ನು ಸಮಾಲೋಚಿಸಿ ಈ ಬಗ್ಗೆ ಕಾರ್ಯನಿರ್ವಹಿಸಬೇಕು.

(15) **ವೈದ್ಯಕೀಯ ಲೆಕ್ಕಪರಿಶೋಧಕರ ನೇಮಕ:** ಅನುಷ್ಠಾನ ಏಜೆನ್ಸೆಯು ಪ್ರಿ–ಆಥರೈಸೇಷನ್ ಸಲುವಾಗಿ ಸಾಕಷ್ಟು ಸಂಖ್ಯೆಯ ವೈದ್ಯಾಧಿಕಾರಿಗಳನ್ನು ಸ್ಥಾನಿಕರಿಸಬೇಕು ಹಾಗೂ ಆಸ್ಪತ್ರೆಗಳ ನಿಯತಕಾಲಿಕ ತಪಾಸಣೆ, ಫಲಾನುಭವಿಗಳಿಂದ ಅಥವ ಆರೋಗ್ಯ ಮಿತ್ರಗಳ ಮೂಲಕ ಸ್ವೀಕರಸುವ ದೂರುಗಳು, ಆಸ್ಪತ್ರೆಗಳ ಸೇವೆಯಲ್ಲಿ ಕೊರತೆ ಇತ್ಯಾದಿಗಳನ್ನು ನೋಡಿಕೊಳ್ಳಲು ಮತ್ತು ರೋಗಿಗಳಿಗೆ ಅಗತ್ಯವಿರುವ ಸಲಹೆಯನ್ನು ನೀಡಿ ಜಾಲ ಆಸ್ಪತ್ರೆ ಹಾಗೂ ಆರೋಗ್ಯ ಮಿತ್ರಗಳ ನಡುವೆ ಸಮನ್ವಯ ಮಾಡಲು ತಜ್ಞವೈದ್ಯರನ್ನು ಸಹ ನೇಮಿಸಬೇಕು.

(16) **ಸಾರ್ವಜನಿಕ ದೂರು ನಿವಾರಣೆ ಕೋಶ:** ಸಾರ್ವಜನಿಕರಿಂದ ಸ್ವೀಕರಿಸಲ್ಪಡುವ ದೂರು / ಸಲಹೆ ಮತ್ತು ಅಹವಾಲುಗಳನ್ನು ಇತ್ಯರ್ಥಪಡಿಸಲು ಸುವರ್ಣ ಆರೋಗ್ಯ ಕಾರ್ಯಕಾರಿ ಸಮಿತಿ ಜಿಲ್ಲಾ ಮತ್ತು ರಾಜ್ಯ ಮಟ್ಟಗಳಲ್ಲಿ ಸಾರ್ವಜನಿಕ ದೂರು ನಿವಾರಣೆ ಕೋಶಗಳನ್ನು ಸ್ಥಾಪಿಸಲಿದೆ.

7. ಯಶಸ್ವಿನಿ ಮತ್ತು ರಾಷ್ಟ್ರೀಯ ಸ್ವಸ್ಥ ಭೀಮಾ ಯೋಜನೆಗಳನ್ನು ಜಾರಿಗೊಳಿಸುತ್ತಿರುವ ಏಜೆನ್ಸಿಗಳು ಆರೋಗ್ಯ ಸುರಕ್ಷಾ ಯೋಜನೆಯಡಿಯ ಫಲಾನುಭವಿಗಳನ್ನು ತಮ್ಮ ಯೋಜನೆಗಳಡಿ ಒಳಪಡಿಸಬಾರದು.

8. ಸುವರ್ಣ ಆರೋಗ್ಯ ಸುರಕ್ಷಾ ಯೋಜನೆಯನ್ನು ಜಿಲ್ಲಾ ಮಟ್ಟಗಳಲ್ಲಿ ಪರಿಣಾಮಿಕಾರಿಯಾಗಿ ಜಾರಿಗೊಳಿಸುವ ಕುರಿತು ಅವಶ್ಯಕ ಮೇಲ್ವಿಚಾರಣೆ ಮಾಡಲು ಜಿಲ್ಲಾ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕೆಳಕಂಡ ಸಮಿತಿ ರಚಿಸಲಾಗಿದೆ:

| | |
|---|---|
| 1. ಜಿಲ್ಲಾ ಜಿಲ್ಲಾಧಿಕಾರಿ | ಅಧ್ಯಕ್ಷರು |
| 2. ಮುಖ್ಯ ಕಾರ್ಯನಿರ್ವಹಣಾಧಿಕಾರಿ | ಸದಸ್ಯರು |
| 3. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ | ಸದಸ್ಯ–ಕಾರ್ಯದರ್ಶಿ |
| 4. ಜಿಲ್ಲಾ ಸರ್ಜನ್ | ಸದಸ್ಯರು |
| 5. ಒಬ್ಬರು ಸ್ಥಳೀಯ ಹಿರಿಯ ತಜ್ಞವೈದ್ಯರು (ಜಿಲ್ಲಾಧಿಕಾರಿಯವರು ನಾಮನಿರ್ದೇಶಿಸುವ) | ಸದಸ್ಯರು |

ಸದರಿ ಜಿಲ್ಲಾ ಸಮಿತಿಯು ಅನುಷ್ಠಾನ ಏಜೆನ್ಸಿ ಹಾಗೂ ಜಾಲ ಆಸ್ಪತ್ರೆಗಳ ನಡುವೆ ಸೂಕ್ತ ಸಮನ್ವಯ ಮಾಡಿ ಸುವರ್ಣ ಆರೋಗ್ಯ ಸುರಕ್ಷಾ ಯೋಜನೆ ಪರಿಣಾಮಕಾರಿಯಾಗಿ ಜಾರಿಯಾಗುತ್ತಿರುವುದನ್ನು ಖಾತ್ರಿಪಡಿಸಿಕೊಳ್ಳಬೇಕು ಹಾಗೂ ನಿಯತಕಾಲಿಕವಾಗಿ ಪ್ರಗತಿ ಪರಿಶೀಲನಾ ವರದಿಯನ್ನು ಕಳುಹಿಸಬೇಕು.

9. ಸುವರ್ಣ ಸುರಕ್ಷಾ ಟ್ರಸ್ಟ್‌ಗೆ ಕಾರ್ಯನಿರ್ವಹಣೆ ಬಂಡವಾಳವಾಗಿ ರೂ.20 ಕೋಟಿಗಳನ್ನು (ಇಪ್ಪತ್ತು ಕೋಟಿ ರೂಪಾಯಿಗಳು ಮಾತ್ರ) ಅನ್ನು ಬಿಡುಗಡೆ ಮಾಡಲು ಹಾಗೂ ಪ್ರಸಕ್ರ ಸಾಲಿನಲ್ಲಿ ರೂ 10 ಕೋಟಿಗಳನ್ನು (ಹತ್ತು ಕೋಟಿ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ. ಈ ಸಂಬಂಧ ತಗಲುವ ವೆಚ್ಚವನ್ನು ಪ್ರಸಕ್ತ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ ಸಂಖ್ಯೆ ಸುವರ್ಣ ಸುರಕ್ಷಾ (ಆಪತ್‌ಬಾಂಧವ) 2210–06–800–0–15 ಯೋಜನೆ ರಡಿ ಒದಗಿಸಿರುವ ರೂ.25.25 ಕೋಟಿಗಳ ಪೈಕಿ ಭರಿಸುವುದು.

10. ಈ ಆದೇಶವನ್ನು ಯೋಜನಾ ಮತ್ತು ಆರ್ಥಿಕ ಇಲಾಖೆಗಳ ಸಹಮತಿಯನ್ನು ಕ್ರಮವಾಗಿ ಅ.ಟಿ.ಸಂಖ್ಯೆ: ಪಿಡಿ 90 ಎಂಇ 2008 ದಿನಾಂಕ 7–9–2008 ಆಇ 2219 ವೆಚ್ಚ–5/2008 ದಿನಾಂಕ 26–12–2008 ರಲ್ಲಿ ಪಡೆದು ಹಾಗೂ ಸಚಿವ ಸಂಪುಟದ ಅನುಮೋದನೆಯನ್ನು ವಿಷಯ ಸಂಖ್ಯೆ:ಸಿ/119/2009 ದಿನಾಂಕ 18–2–2009 ರಂದು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1100

**ಎಂ. ಮದನ ಗೋಪಾಲ್**

ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ENERGY SECRETARIAT**

**Sub:** Transfer of 1.5 MW Wind Power Capacity in favour of M/s Sree Minerals-reg.

**Read:** 1. Government Order No: DE 56 NCE 2004 dated: 12.3.2004.
2. Government Order No: EN 101 NCE 2005 dated: 13.4.2005.
3. Government Order No: EN 124 NCE 2007 dated: 16.4.2007.
4. Letter No: KRED/08/SM-SIL/2009/1161 dated: 6/7.3.2009 received from the Managing Director, Karnataka Renewable Energy Development Limited, Bangalore.

**Preamble:-**

In the Government Orders read at (1) & (2) above, sanction has been accorded for implementation of 15.00 MW capacity Wind Power Project at Gopalapura region in Hassan District to M/s Suzlon Infrastructure Limited.

In the Government Order read at (3) above sanction has been accorded for enhancement of wind power capacity from 15.00 MW to 46.5 MW at Gopalapura region in Hassan District to M/s Suzlon Infrastructure Limited.

The Managing Director, Karnataka Renewable Energy Development Limited, Bangalore in his letter read at (4) above has recommended to the Government for transfer of 1.5 MW Wind Power capacity in favour of M/s Sree Minerals of the 46.5 MW capacity sanctioned in favour of M/s Suzlon Infrastructure Limited at Jagaravalli Village, Hassan Taluk, Hassan District.

The proposal has been examined in detail and the following orders issued : -

**Government Order No: EN 225 NCE 2009, Bangalore, Dated: 21st March 2009**

Government accords approval for transfer of 1.5 MW Wind Power capacity in favour of M/s Sree Minerals of the 46.5 MW capacity sanctioned in favour of M/s Suzlon Infrastructure Limited at Jagaravalli Village, Gopalapura area (Survey No: 7), Hassan Taluk, Hassan District subject to the following conditions :-

1. The company shall commission the project by 31st March 2009.
2. The company shall supply the entire power to the State Grid.

The other terms and conditions of the Government Order read at (1) above shall IPSO FACTO applicable.

By Order and in the name of Governor of Karnataka,

P.R. 1024

**S.J. SAMPATH KUMAR**

Under Secretary to Government, Energy Department.

**Sub:** Transfer of 6.25 MW Wind Power Capacity in favour of M/s Sargam Retails Private Limited-reg.

**Read:** 1. Government Order No: EN 393 NCE 2005 dated: 28.12.2005.
2. Government Order No: EN 180 NCE 2007 dated: 15.5.2007.
3. Letter No: KRED/08/Sargam/2009/842 dated: 21.1.2009/12.2.2009 received from the Managing Director, Karnataka Renewable Energy Development Limited, Bangalore.

**Preamble:-**

In the Government Order read at (1) above, sanction has been accorded for implementation of 44.4 MW capacity Wind Power Project at Gangavanasara and Kudrekonda areas in Shimoga and Davangere Districts to M/s Sarjan Realities Limited.

In the Government Order read at (2) above sanction has been accorded for enhancement of wind power capacity from 44.4 MW to 111.00 MW at Gangavanasara and Kudrekonda areas in Shimoga and Davangere Districts to M/s Sarjan Realities Limited.

The Managing Director, Karnataka Renewable Energy Development Limited, Bangalore in his letter read at (3) above has recommended to the Government for transfer of 6.25 MW Wind Power

capacity in favour of M/s Sargam Retails Private Limited of the 111.00 MW capacity sanctioned in favour of M/s Sarjan Realities Limited at Yaraganahal Village, Honnali Taluk, Davangere District.

The proposal has been examined in detail and the following orders issued : -

**Government Order No: EN 145 NCE 2009, Bangalore, Dated: 21st March 2009**

Government accords approval for transfer of 6.25 MW Wind Power capacity in favour of M/s Sargam Retails Private Limited of the 111.00 MW capacity sanctioned in favour of M/s Sarjan Realities Limited at Yaraganahal Village, Kudurekonda area (Survey No: 111), Honnali Taluk, Davangere District subject to the following conditions :-

1. The company shall commission the project by 31st March 2009.
2. The company shall supply the entire power to the State Grid.

The other terms and conditions of the Government Order read at (1) above shall IPSO FACTO applicable.

By Order and in the name of Governor of Karnataka,

P.R. 1025 **S.J. SAMPATH KUMAR**

Under Secretary to Government, Energy Department.

**Sub:** Transfer of 1.5 MW Wind Power Capacity in favour of M/s ICSA (India) Limited (Phase-1)-reg.

**Read:** 1. Government Order No: EN 393 NCE 2005 dated: 28.12.2005.
2. Government Order No: EN 180 NCE 2007 dated: 15.5.2007.
3. Letter No: KRED/08/ICSA(P-1)-SRL/2009/834 dated: 29.1.2009/12.2.2009 received from the Managing Director, Karnataka Renewable Energy Development Limited, Bangalore.

**Preamble:-**

In the Government Order read at (1) above, sanction has been accorded for implementation of 44.4 MW capacity Wind Power Project at Gangavanasara and Kudrekonda areas in Shimoga and Davangere Districts to M/s Sarjan Realities Limited.

In the Government Order read at (2) above sanction has been accorded for enhancement of wind power capacity from 44.4 MW to 111.00 MW at Gangavanasara and Kudrekonda areas in Shimoga and Davangere Districts to M/s Sarjan Realities Limited.

The Managing Director, Karnataka Renewable Energy Development Limited, Bangalore in his letter read at (3) above has recommended to the Government for transfer of 1.5 MW Wind Power capacity in favour of M/s ICSA (India) Limited (Phase-1) of the 111.00 MW capacity sanctioned in favour of M/s Sarjan Realities Limited at Naraginakere Village, Honnali Taluk, Davangere District.

The proposal has been examined in detail and the following orders issued : -

**Government Order No: EN 139 NCE 2009, Bangalore, Dated: 21st March 2009**

Government accords approval for transfer of 1.5 MW Wind Power capacity in favour of M/s ICSA (India) Limited (Phase-1) of the 111.00 MW capacity sanctioned in favour of M/s Sarjan Realities Limited at Naraginakere Village, Kudurekonda area (Survey No: 12), Honnali Taluk, Davangere District subject to the following conditions :-.

1. The company shall commission the project by 31st March 2009.
2. The company shall supply the entire power to the State Grid.

The other terms and conditions of the Government Order read at (1) above shall **IPSO FACTO** applicable.

By Order and in the name of Governor of Karnataka,

P.R. 1026 **S.J. SAMPATH KUMAR**

Under Secretary to Government, Energy Department.

**Sub:** Transfer of 5.00 MW Wind Power Capacity in favour of M/s Ramgad Minerals & Mining Limited (Phase-3)-reg.

**Read:** 1. Government Order No: EN 13 NCE 2006 dated: 20.4.2006.
2. Letter No: KRED/08/RM&MPL(P-3)-SIL/2009/846 dated: 11/12.2.2009 received from the Managing Director, Karnataka Renewable Energy Development Limited, Bangalore.

**Preamble:-**

In the Government order read at (1) above, sanction has been accorded for implementation of 22.5 MW capacity Wind Power Project at Davangere and Bellary Districts to M/s Suzlon Infrastructure Limited.

The Managing Director, Karnataka Renewable Energy Development Limited, Bangalore in his letter read at (2) above has recommended to the Government for transfer of 5.00 MW Wind Power capacity in favour of M/s Ramgad Minerals & Mining Limited (Phase-3) of the 8.75 part capacity of the main 22.5 MW sanctioned in favour of M/s Suzlon Infrastructure Limited at Karadigudda, Nichchapur, Chigateri of Davangere District.

The proposal has been examined in detail and the following orders issued : -

**Government Order No: EN 148 NCE 2009, Bangalore, Dated: 21st March 2009**

Government accords approval for transfer of 5.00 MW Wind Power capacity in favour of M/s Ramgad Minerals & Mining Limited (Phase-3) of the 8.75 part capacity of the main 22.5 MW sanctioned in favour of M/s Suzlon Infrastructure Limited as detailed below :-

| | |
|---|---|
| Karadigudda, Nichchapur, Chigateri, Davanagere district. | The proposed area consists of a circular ridge followed by two small independent knobs. This ridge has a single peak and the area comes under the Jajikalgudda Reserved Forest and the area is situated in the North of Nichchapur and comes under the following Geographical co-ordinates:<br>**Latitude:** 14°47’14”- 14°48’26” N<br>**Longitude:** 76°3’12”- 76°4’29” E<br>**Ridge peaks:** 796m Amsl<br>Additional Co-ordinates necessitated upon MOEF approval letter No: 4-KRC-330/2007-BAN/508 dated: 1.8.2007 :-<br>**Latitude:** 14°47’54”- 14°49’41” N<br>**Longitude:** 76°1’57”- 76°3’32” E<br>**Ridge peaks:** 652m Amsl<br>Chigateri & Nichapura Village, Harapanahalli Taluk, Davangere District (Survey No: 2 & 243) |

and subject to the following conditions :-

1. The company shall commission the project by 31st March 2009.
2. The company shall supply the entire power to the State Grid.

The other terms and conditions of the Government Order read at (1) above shall **IPSO FACTO** applicable.

By Order and in the name of Governor of Karnataka,

P.R. 1027

**S.J. SAMPATH KUMAR**

Under Secretary to Government, Energy Department.

**Sub:** Transfer of 3.00 MW Wind Power Capacity in favour of M/s Gangadhar Narsingdas Agrawal-reg.

**Read:** 1. Government Order No: EN 393 NCE 2005 dated: 28.12.2005.
2. Government Order No: EN 180 NCE 2007 dated: 15.5.2007.

3. Letters No: KRED/08/GNA-SRL/2009/1125 dated: 4/5.3.2009 and KRED/08/GNA-Vol-II-SRL/2009/848 dated: 4/12.2.2009 received from the Managing Director, Karnataka Renewable Energy Development Limited, Bangalore.

**Preamble:-**

In the Government Order read at (1) above, sanction has been accorded for implementation of 44.4 MW capacity Wind Power Project at Gangavanasara and Kudrekonda areas in Shimoga and Davangere Districts to M/s Sarjan Realities Limited.

In the Government Order read at (2) above sanction has been accorded for enhancement of wind power capacity from 44.4 MW to 111.00 MW at Gangavanasara and Kudrekonda areas in Shimoga and Davangere Districts to M/s Sarjan Realities Limited.

The Managing Director, Karnataka Renewable Energy Development Limited, Bangalore in his letters read at (3) above has recommended to the Government for transfer of 3.00 MW Wind Power capacity in favour of M/s Gangadhar Narsingdas Agrawal of the 111.00 MW capacity sanctioned in favour of M/s Sarjan Realities Limited at Kudurekonda Village, Honnali Taluk, Davangere District.

The proposal has been examined in detail and the following orders issued : -

**Government Order No: EN 16 NCE 2009, Bangalore, Dated: 21st March 2009**

Government accords approval for transfer of 3.00 MW Wind Power capacity in favour of M/s Gangadhar Narsingdas Agrawal of the 111.00 MW capacity sanctioned in favour of M/s Sarjan Realities Limited at Kudurekonda Village, Kudurekonda area (Survey No: 28), Honnali Taluk, Davangere District subject to the following conditions :-

1. The company shall commission the project by 31st March 2009.
2. The company shall supply the entire power to the State Grid.

The other terms and conditions of the Government Order read at (1) above shall **IPSO FACTO** applicable.

By Order and in the name of Governor of Karnataka,

P.R. 1028

**S.J. SAMPATH KUMAR**

Under Secretary to Government, Energy Department.

**Sub:** Transfer of 3.00 MW Wind Power Capacity in favour of M/s Eastman International-reg.

**Read:** 1. Government Order No: DE 56 NCE 2004 dated: 12.3.2004.

2. Government Order No: EN 101 NCE 2005 dated: 13.4.2005.

3. Government Order No: EN 124 NCE 2007 dated: 16.4.2007.

4. Letter No: KRED/08/EI-SRL/2009/1150 dated: 4/6.3.2009 received from the Managing Director, Karnataka Renewable Energy Development Limited, Bangalore.

**Preamble:-**

In the Government Orders read at (1) & (2) above, sanction has been accorded for implementation of 15.00 MW capacity Wind Power Project at Gopalapura region in Hassan District to M/s Suzlon Infrastructure Limited.

In the Government Order read at (3) above sanction has been accorded for enhancement of wind power capacity from 15.00 MW to 46.5 MW at Gopalapura region in Hassan District to M/s Suzlon Infrastructure Limited.

The Managing Director, Karnataka Renewable Energy Development Limited, Bangalore in his letter read at (4) above has recommended to the Government for transfer of 3.00 MW Wind Power capacity in favour of M/s Eastman International of the 46.5 MW capacity sanctioned in favour of M/s Suzlon Infrastructure Limited at Ballenahalli and Jagaravalli Villages, Hassan Taluk, Hassan District.

The proposal has been examined in detail and the following orders issued : -

**Government Order No: EN 207 NCE 2009, Bangalore, Dated: 21st March 2009**

Government accords approval for transfer of 3.00 MW Wind Power capacity in favour of M/s Eastman International of the 46.5 MW capacity sanctioned in favour of M/s Suzlon Infrastructure Limited at Ballenahalli and Jagaravalli Villages, Gopalapura area (Survey No: 10 & 7), Hassan Taluk, Hassan District subject to the following conditions :-

1. The company shall commission the project by 31st March 2009.
2. The company shall supply the entire power to the State Grid.

The other terms and conditions of the Government Order read at (1) above shall **IPSO FACTO** applicable.

By Order and in the name of Governor of Karnataka,

P.R. 1029

**S.J. SAMPATH KUMAR**

Under Secretary to Government, Energy Department.

**Sub:** Transfer of 4.5 MW Wind Power Capacity in favour of M/s Abhishek Developers (Phase-3)- reg.

**Read:** 1. Government Order No: DE 56 NCE 2004 dated: 12.3.2004.
2. Government Order No: EN 101 NCE 2005 dated: 13.4.2005.
3. Government Order No: EN 124 NCE 2007 dated: 16.4.2007.
4. Letter No: KRED/08/AD(P-3)-SRL/2009/1131 dated: 5.3.2009 received from the Managing Director, Karnataka Renewable Energy Development Limited, Bangalore.

**Preamble:-**

In the Government Orders read at (1) & (2) above, sanction has been accorded for implementation of 15.00 MW capacity Wind Power Project at Gopalapura region in Hassan District to M/s Suzlon Infrastructure Limited.

In the Government Order read at (3) above sanction has been accorded for enhancement of wind power capacity from 15.00 MW to 46.5 MW at Gopalapura region in Hassan District to M/s Suzlon Infrastructure Limited.

The Managing Director, Karnataka Renewable Energy Development Limited, Bangalore in his letter read at (4) above has recommended to the Government for transfer of 4.5 MW Wind Power capacity in favour of M/s Abhishek Developers (Phase-3) of the 46.5 MW capacity sanctioned in favour of M/s Suzlon Infrastructure Limited at Bankapura, Samydravalli, Chaudanahalli Villages of Holenarasipura Taluk, Hassan District.

The proposal has been examined in detail and the following orders issued : -

**Government Order No: EN 208 NCE 2009, Bangalore, Dated: 21st March 2009**

Government accords approval for transfer of 4.5 MW Wind Power capacity in favour of M/s Abhishek Developers (Phase-3) of the 46.5 MW capacity sanctioned in favour of M/s Suzlon Infrastructure Limited at Bankapura, Samydravalli, Chaudanahalli Villages, Gopalapura area (Survey No: 48, 59 & 122), Holenarasipura Taluk, Hassan District subject to the following conditions :-

1. The company shall commission the project by 31st March 2009.
2. The company shall supply the entire power to the State Grid.

The other terms and conditions of the Government Order read at (1) above shall **IPSO FACTO** applicable.

By Order and in the name of Governor of Karnataka,

P.R. 1030

**S.J. SAMPATH KUMAR**

Under Secretary to Government, Energy Department.

